# ಕೊಡಗು ಸಂಗಾತಿ


'ಏಪ್ರಿಲ್ 16 ರಿಂದ 30, 2000 ಪಾಕ್ಷಿಕ ಪತ್ರಿಕೆ (ಪಗ್ಗು 3 ರಿಂದ 17, 2000)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 ಸಂಪುಟ : 4 ಸಂಚಿಕೆ : 8 ಪುಟಗಳು : 24 ಬೆಲೆ ರೂ. : 6-00




## 20ನೇ ಶತಮಾನ ಕಂಡ ಅರೆಭಾಷೆ ಗೌಡ ಜನಾಂಗದ ಮಹಾನ್ ವ್ಯಕ್ತಿ.
## ಸುಳ್ಯದ ಶ್ರೀ ಕುರುಂಜಿ ವೆಂಕಟರಮಣ ಗೌಡರು

## ಅವಿರೋಧ ಆಯ್ಕೆ



ಮೂರ್ನಾಡು ವ್ಯವಸಾಯ ಸೇವಾ ಸಹಕಾರ ಬ್ಯಾಂಕಿನ ನೂತನ ಅಧ್ಯಕ್ಷರಾಗಿ ಐಕೊಳ ಗ್ರಾಮದ ಶ್ರೀ ಕೊಂಪುಳೀರ ಗಣೇಶ್ ಬೋಪಯ್ಯನವರು ತಾ|| 30-3-2000ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಮುಂದಿನ ಸಾಲಿಗೆ ಅವಿರೋದವಾಗಿ ಆಯ್ಕೆ ಆಗಿರುತ್ತಾರೆ. ಇವರು ಐಕೊಳದ ಶ್ರೀ ಅಯ್ಯಪ್ಪ ಯುವಕ ಸಂಘದ ಅಧ್ಯಕ್ಷರು, ಗೌಡ ಸಾಂಸ್ಕೃತಿಕ ಅಕಾಡೆಮಿಯ ನಿರ್ದೇಶಕರು, ಈ ಹಿಂದೆ ಜಿಲ್ಲಾ ಮಟ್ಟದ ಯುವ ಪ್ರಶಸ್ತಿ ಪಡೆದುಕೊಂಡಿದ್ದಾರೆ.

ಹಾಗೆಯೇ ಉಪಾಧ್ಯಕ್ಷರಾಗಿ ಕಿಗ್ಗಾಲು ಗ್ರಾಮದ ಶ್ರೀ ಕೆ.ಸಿ. ರಾಮಮೂರ್ತಿ ಅವಿರೋಧವಾಗಿ ಆಯ್ಕೆ ಆಗಿರುತ್ತಾರೆ.

---

## ನಿಮ್ಮ 20ನೇ ವರ್ಷದ ದಾಂಪತ್ಯ ಸುಖ ಜೀವನಕ್ಕೆ ಶುಭ ಹಾರೈಕೆಗ.

ನಿಮ್ಮಿಬ್ಬರ ದಾಂಪತ್ಯ ಜೀವನ, ಆಯಿಸ್ ಸುಖ ಸಂಪತ್ತ್, ಸಮೃದ್ಧಿಂದ ಕೂಡಿರ್‌ಲಿತ್ತೇಳಿ ಕುಲದೇವ್ರು ವೆಂಕಟರಮಣನ ಬೇಡಿಕಂಡವೆ.

ಮದ್ವೆ ತಾರೀಖ್



20-4-1980

ಉಳುವಾರನ ಘನು ಚಂದ್ರಶೇಖರ, ಅಬು-ದಾಬಿ (U.A.E.)

ವಿಳಾಸ : 1850, ಮೊದಲ ಕ್ರಾಸ್, 'ಕೆ' ಬ್ಲಾಕ್, ಕುವೆಂಪುನಗರ, ಮೈಸೂರು - 570 023 ✆ : 562619

ಶುಭಾಶಯನ್ನ ಬಯಸವು : ಮಕ್ಕಳು ಪೂರ್ಣಿಮ, ಪವಿತ್ರ, ಪ್ರಜ್ವಲಿ

ಮತ್ತೆ ಚೆರಿಯಮನೆ ನರೇಶ್, ನರೇಶ್ ಗ್ಲಾಸ್ ಮತ್ತೆ ಪ್ಲೈವುಡ್

ಹಂಗೆನೆ ಪುಳಕಂಡ್ರ ಪ್ರದೀಪ್ ಮುತ್ತಪ್ಪ, L.L.B., LL.M., ಪುಳಕಂಡ್ರ ಸಂದೀಪ್ ಮುತ್ತಪ್ಪ, B.E. (E & C)

---



ಕಲ್ಲುಮುಟ್ಲು ಬಸಪ್ಪ

**ಕೊಡಗು ಸಂಗಾತಿಯ ಬೆಂಗಳೂರು ನಗರ ಸಂಚಾಲಕರಾಗಿ, ವರದಿಗಾರರಾಗಿ ಶ್ರೀ ಕಲ್ಲುಮುಟ್ಲು ಬಸಪ್ಪನವರೆ ಮುಂದುವರಿಕೆ. ಓದುಗರ ಸಹಕಾರ ನಿರೀಕ್ಷೆ.**

ವಿಳಾಸ : ಕಲ್ಲುಮುಟ್ಲು ಬಸಪ್ಪ,
ನಂ. 37, 3ನೇ ಮೇನ್,
ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ,
ಬೆಂಗಳೂರು -19
✆ : 080- 6500946

---

## ಬೇಸಿಗೆ ಕ್ರೀಡಾ ಶಿಬಿರ ರದ್ದು

ಈ ಹಿಂದೆ ದಿನಾಂಕ16-5-00 ರಿಂದ 31-5-00ರ ಮಧ್ಯೆ ಬೇಸಿಗೆ ಕ್ರೀಡಾ ಶಿಬಿರವನ್ನು ಮೈಸೂರಿನ ಗೌಡ ವಿದ್ಯಾರ್ಥಿನಿಲಯದಲ್ಲಿ ಹಮ್ಮಿಕೊಳ್ಳಲು ನಿರ್ಧರಿಸಲಾಗಿತ್ತು. ಆದರೆ ಕಾರಣಾಂತರದಿಂದ ನಡೆಸಲು ಅನಾನುಕೂಲವಾದ್ದರಿಂದ ವಿಷಾದಿಸುತ್ತೇವೆ. ಜನಾಂಗದ ಯುವಜನ ಕ್ರೀಡಾ ಆಸಕ್ತರು ಎಂದಿನಂತೆ ಸಹಕರಿಸುವಂತೆ ಈ ಮೂಲಕ ವಿನಂತಿಸಲಾಗಿದೆ.

**ಅಧ್ಯಕ್ಷರು, ಕೊಡಗುಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ,**



# ಒಳನೋಟ

2000, ಏಪ್ರಿಲ್ 16-30ರ ತನಕ





| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
| ಸಂಗಾತಿ ಚಿಹ್ನೆ ಮತ್ತು ಅರೆಭಾಷೆ ಕ್ಯಾಸೆಟ್ ಲಭ್ಯ | ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ **ಫೋನ್ :** 08272/29620 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್ :** 08276/73370 |
| ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, **ಫೋನ್ :**080/6342822 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,**ಫೋನ್ :** 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕೊಡಗು ಜಿಲ್ಲೆಯ ಚರಿತ್ರೆ

ಈಗಿನ ಪೀಳಿಗೆಗೆ ಕೊಡಗಿನ ಚರಿತ್ರೆ ಏನೇನೂ ತಿಳಿಯದಾಗಿದೆ ಎಂಬುದು ಸರ್ವಸಾಮಾನ್ಯ ಅಭಿಪ್ರಾಯ. ಒಂದು ದೇಶದ ಯಾ ರಾಜ್ಯದ ಚರಿತ್ರೆಯನ್ನು ತಿಳಿದುಕೊಳ್ಳುವುದು ಹೇಗೆ ಅವಶ್ಯಕವೋ ಅದೇ ರೀತಿ ಆಯಾಯ ಜಿಲ್ಲೆಯ ಚರಿತ್ರೆಯನ್ನು ಆ ಜಿಲ್ಲೆಯ ಪ್ರಜೆ ತಿಳಿದುಕೊಳ್ಳುವುದು ಅವಶ್ಯಕ.

ಕೊಡಗಿನ ಚರಿತ್ರೆಯನ್ನು ಬೆರಳೆಣಿಕೆಯ ಲೇಖಕರು ಬರೆದಿದ್ದರೂ ಅವುಗಳು ಲಭ್ಯವಿಲ್ಲ. ಕೊಡಗು ಜಿಲ್ಲೆಯ ಗಝೆಟಿಯರ್ ನಲ್ಲಿ ಅಲ್ಪ ಸ್ವಲ್ಪ ಲಭ್ಯವಿದೆ. ಆದರೆ ಪುಟ್ಟ ಮಕ್ಕಳಿಗೆ ಕೊಡಗಿನ ಚರಿತ್ರೆಯ ವಿಷಯ ತಿಳಿಸುವ ಚಿಕ್ಕ ಪುಟ್ಟ ಹೊತ್ತಿಗೆಗಳು ಹೊರಬರಬೇಕು. ಇದರಿಂದ ಪ್ರತಿಯೊಬ್ಬ ಮಗುವಿನಲ್ಲಿ ತಾನು ವಾಸಿಸುವ ಜಿಲ್ಲೆಯ ಇತಿಹಾಸ ತಿಳಿದಂತೆ ಆಗುತ್ತದೆ. ಪಠ್ಯಪುಸ್ತಕ ಇಲಾಖೆಯವರು ಸಮಾಜ ವಿಜ್ಞಾನ (Social Studies)ನಲ್ಲಿ ಒಂದೊಂದು ತರಗತಿ ಆ ಜಿಲ್ಲೆಯ ಚರಿತ್ರೆಯ ವಿಷಯವನ್ನು ಸಂಗ್ರಹಿಸಿ ಪ್ರಕಟಿಸಬೇಕು. ಹೀಗೆ ಆದರೆ ಪ್ರತಿಯೊಬ್ಬ ಪ್ರಜೆಯು ತಾನು ಹುಟ್ಟಿದ ಊರಿನ ಚರಿತ್ರೆಯನ್ನು ತಿಳಿದಂತಾಗುತ್ತದೆ. ಇದರಿಂದಾಗಿ ಆ ಪ್ರದೇಶದ ಆಗು ಹೋಗುಗಳ ಪರಿಚಯವಾಗುತ್ತದೆ. ಈ ಕೆಲಸವನ್ನು ನಮ್ಮ ಶಾಸಕರು ವಿಧಾನ ಸಭೆಯಲ್ಲಿ ಚರ್ಚಿಸಬೇಕು.

ಚರಿತ್ರೆಯನ್ನು ಓದಿ ತಿಳಿಯುವ ಹವ್ಯಾಸ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಬರಬೇಕಾದರೆ ಆಯಾಯ ಜಿಲ್ಲೆಗಳ ಚರಿತ್ರೆಗಳನ್ನು ಪಠ್ಯ ಪುಸ್ತಕದಲ್ಲಿ ಸೇರಿಸಬೇಕು. ಇಡೀ ಕರ್ನಾಟಕದಲ್ಲಿರುವ ಜಿಲ್ಲೆಗಳ ಚರಿತ್ರೆಯನ್ನು ಒಂದೇ ಪುಸ್ತಕದಲ್ಲಿ ಮುದ್ರಿಸುವ ಅವಶ್ಯಕತೆ ಇಲ್ಲ. ಆಯಾಯ ಜಿಲ್ಲೆಗೆ ಬೇರೆ ಬೇರೆಯಾಗಿ ಚಿಕ್ಕ ಹೊತ್ತಿಗೆಯನ್ನು ಪ್ರಕಟಿಸಬೇಕೆಂದು ಸಂಗಾತಿ ಅಭಿಪ್ರಾಯ ಪಡುತ್ತದೆ.

---

## ಶಿಕ್ಷಣ ರಂಗದ ದೃವತಾರೆ ಶ್ರೀ ಕುರುಂಜಿ ವೆಂಕಟರಮಣ ಗೌಡರು

ಕೆಲವರಿಗೆ ಹಣವಿರುತ್ತದೆ, ಗುಣವಿರದು. ಮತ್ತೆ ಕೆಲವರಿಗೆ ಗುಣವಿರುತ್ತದೆ ಹಣವಿರದು. ಆದರೆ ಶ್ರೀ ಕುರುಂಜಿ ವೆಂಕಟರಮಣ ಗೌಡರು ಈ ಮೇಲಿನ ಮಾತಿಗೆ ಅಪವಾದವಾಗಿ ದ್ದಾರೆ. ಶ್ರೀಯುತರಲ್ಲಿ ಹಣ ಮತ್ತು ಗುಣ ಎರಡೂ ಇರುವುದು ಕನ್ನಡ ನಾಡಿನ ಸೌಭಾಗ್ಯ. ದ.ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಹೆಸರು ಭಾರತದ ನಕ್ಷೆಯಲ್ಲಿ ಪ್ರಜ್ವಲಿಸುವಂತೆ ಮಾಡಿದ ಖ್ಯಾತಿ ಕೆ.ವಿ.ಜಿ.ಯವರಿಗೆ ಸಲ್ಲುತ್ತದೆ.

ಶ್ರೀ ಕುರುಂಜಿ ಮಹಾಲಿಂಗಗೌಡ ಮತ್ತು ಶ್ರೀಮತಿ ಲಕ್ಷ್ಮಿ ದಂಪತಿಗಳ ದ್ವಿತೀಯ ಪುತ್ರರಾಗಿ ಶ್ರೀ ವೆಂಕಟರಮಣಗೌಡರು 26-12-1928ರಲ್ಲಿ ಜನಿಸಿದರು. ತಂದೆ ಶ್ರೀ ಮಹಾಲಿಂಗಗೌಡರು ಮಾಸ್ತರರಾಗಿದ್ದರು. ತಾಯಿ ಶ್ರೀಮತಿ ಲಕ್ಷ್ಮಿ. ಮಗು ವೆಂಕಟರಮಣ ಹುಟ್ಟಿದ ಕಾಲಕ್ಕೆ ಬಡತನದ ಬೇಗೆಯಲ್ಲಿ ಬೆಂದವರು. ಆದರೆ ದಿನಗಳುರುಳಿದಂತೆ ಬದುಕು ಬದಲಾಯಿತು. ಬಡತನ ಮಾಯವಾಯಿತು. ಏನಿದರ ಗುಟ್ಟು? ಸತತ ದುಡಿಮೆ. ಗಳಿಸಿದ್ದನ್ನು ಉಳಿಸಿದ್ದರ ಫಲ, ಉಳಿಸಿದ್ದನ್ನು ಬಳಸಿದ್ದರ ಪ್ರತಿಫಲ. ನಾವು ನೀವೆಲ್ಲಾ ಕಾಣುತ್ತಿರುವ ಸುಮಾರು ಮೂವತ್ತೊಂಬತ್ತಕ್ಕೂ ಹೆಚ್ಚು ಸಂಸ್ಥೆಗಳು. ವಿದ್ಯಾದೇಗುಲದ ಬಾಗಿಲು ತೆರೆದ ಮಹಾಚೇತನ 72ರ ಹರೆಯದ ಶ್ರೀ ವೆಂಕಟರಮಣಗೌಡರು. ಏಕ ವ್ಯಕ್ತಿ ಏಕಶಕ್ತಿಯಾಗಿ ಹೊರಚಿಮ್ಮಿದ ಶ್ರೀ ಗೌಡರು ಓರ್ವ ಆದರ್ಶ ಕೃಷಿಕರು. ಕೃಷಿಯಿಂದ ಬಂದು ಆದಾಯವನ್ನು ವಿದ್ಯಾಸಂಸ್ಥೆಗಳನ್ನುಕಟ್ಟಲು ವಿನಿಯೋಗಿಸಿದರು. ಅಷ್ಟೇ ಅಲ್ಲ ದಾನ ನೀಡಿ " ದಾನ ಚಿಂತಾಮಣಿ ಅತ್ತಿಮಬ್ಬೆಯನ್ನು" ನೆನಪಿಗೆ ತಂದುಕೊಟ್ಟ ಅದ್ವಿತೀಯ ವ್ಯಕ್ತಿ ಇವರು.

" ದಾನ ಕೊಟ್ಟು ನೋಡಬೇಕು, ಅದರಿಂದಾಗುವ ತೃಪ್ತಿ ಅಷ್ಟಿಷ್ಟಲ್ಲ" ಎನ್ನುವ ಗೌಡರನ್ನು ಹೇಗೆ ಅಭಿನಂದಿಸಬೇಕೋ ತಿಳಿಯದು. ದಿನದ 18 ಗಂಟೆಗಳ ದುಡಿಮೆ ಇವರದು. ಸುಳ್ಯದ ಜನತೆ ಶ್ರೀಯುತರನ್ನು "ಆಧುನಿಕ ಸುಳ್ಯದ ವಿದ್ಯಾಪುನರುಜ್ಜೀವನದ ಪಿತಾಮಹಾ" ಎಂದು ಕೊಂಡಾಡಿದ್ದಾರೆ. " ಮಾತಾಡಿದಂತೆ ನಡೆಯುವವ ಜಗವ ಕೂತಲ್ಲಿ ಆಳ್ವ ಸರ್ವಜ್ಞ" ಎನ್ನುವ ಸರ್ವಜ್ಞನ ಮಾತಿಗೆ ಇವರು ಉದಾಹರಣೆಯಾಗಿದ್ದಾರೆ.

ಶ್ರೀಯುತರು ಎಳೆವೆಯಲ್ಲಿಯೇ ಗಾಂಧೀಜಿಯವರನ್ನು ಕಂಡು ಅವರಿಂದ ಪ್ರಭಾವಿತರಾದವರು. ಆ ಬಳಿಕ ವಿದ್ಯಾರ್ಥಿಯಾಗಿದ್ದಾಗ ವಿವೇಕಾನಂದರ ಜೀವನ ಇವರ ಮೇಲೆ ಗಾಡ ಪ್ರಭಾವ ಬೀರಿದೆ. ಬಸವಣ್ಣನವರ ವಿಚಾರಧಾರೆಗಳಿಗೆ ಇವರು ಮನಸೋತವರು. ನೆಹರೂ ಅವರ ಸಮಾಜವಾದ ಇವರಿಗೆ ಇಷ್ಟವಾಗಿದೆ. ತಮ್ಮ ತಂದೆಯವರ ಮಾರ್ಗದರ್ಶನ ಮತ್ತು ಮಣಿಪಾಲದ ಸ್ಥಾಪನೆಗ ಬುನಾದಿ ಯಾಯಿತೆಂದು ಅಂದಿನ ದಿನಗಳನ್ನು ಇವರು ನೆನೆಯುತ್ತಾರೆ.

ಶ್ರೀಯುತರದು ಒಂದು ಮಾದರಿ ಕುಟುಂಬ. ಪತಿಯ ಶ್ರೇಯಸ್ಸಿಗೆ ಪತ್ನಿಯು ಮೂಲ. ಶ್ರೀಮತಿ ಜಾನಕಿಯವರು ಮನಮೆಚ್ಚಿದ ಮಡದಿಯಾಗಿ ಪತಿಯ ಹೆಗಲಿಗೆ ಹೆಗಲು ಕೊಡುತ್ತಿದ್ದಾರೆ. ಮನೆಯ ಹಾಗೂ ತೋಟದಲ್ಲಿನ ಎಲ್ಲಾ ಜವಾಬ್ದಾರಿಗಳನ್ನು ಅತ್ಯುತ್ತಮವಾಗಿ ನಿರ್ವಹಿಸುತ್ತಿರುವುದರಿಂದಲೇ ಶ್ರೀ ಕೆ.ವಿ. ಜಿ ಯವರು ಊರಿನ ಅಭಿವೃದ್ಧಿಯ ಕಡೆ ಹೆಚ್ಚುಗಮನ ಕೊಡಲು ಸಾಧ್ಯವಾಗಿರುವುದು. ಈ ದಂಪತಿಗಳಿಗೆ ಮೂವರು ಕಣ್ಮಣಿಗಳು. ಹಿರಿಯಪುತ್ರ ಡಾ| ಕೆ.ವಿ. ಚಿದಾನಂದ M.B.B.S., M.S., FRSH., ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್ ಸಂಸ್ಥೆಯ ಉಪಾಧ್ಯಕ್ಷರೂ ಮತ್ತು ಕುರುಂಜಿಕಾರ್ಸ್ ಜನರಲ್ ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಎರಡನೆ ಯವರು ಡಾ| ರೇಣುಕಾ ಪ್ರಸಾದ್ M.B.B.S., ಇವರು ಶ್ರೀ ಕೆ.ವಿ.ಜಿ ವಿದ್ಯಾಸಂಸ್ಥೆಗಳ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಓರ್ವ ಪುತ್ರಿ ಶ್ರೀಮತಿ ಗೋವರ್ಧಿನಿ.

ಇವರು ವೈದ್ಯರಾದ ಶ್ರೀ ತೋಟಂಬೈಲು ಜಯಕುಮಾರ್‌ರನ್ನು ಮದುವೆ ಯಾಗಿದ್ದಾರೆ. ಈಗ ತಮ್ಮ ಪತಿಯೊಡನೆ ಇಂಗ್ಲೆಂಡ್ ನಲ್ಲಿದ್ದಾರೆ.

ಕೆ.ವಿ.ಜಿ. ಪಾಲಿಟೆಕ್ನಿಕ್, ಐ.ಟಿ.ಐ., ನರ್ಸಿಂಗ್ ಕಾಲೇಜ್, ಡೆಂಟಲ್ ಕಾಲೇಜ್, ಆಂಗ್ಲ ಮಾಧ್ಯಮ ಪ್ರೌಢಶಾಲೆ, ಇವೆಲ್ಲವೂ ಕುರುಂಜಿ ಭಾಗ್‌ನ 50 ಎಕರೆ ಭೂ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಇವೇ ಅಲ್ಲದೆ ಅತ್ಯಾಧುನಿಕ ಸುಸಜ್ಜಿತ ಉಪಕರಣಗಳನ್ನೊಳಗೊಂಡ 200 ಹಾಸಿಗೆಗಳ ಕೆ.ವಿ.ಜಿ. ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ, ಸುಳ್ಯ, ಅರಂತೋಡು, ಪೆರಾಜೆ ಮತ್ತು ಕೊಲ್ಲಮೊಗರುನಲ್ಲಿರುವ ನಾಲ್ಕು ಪ್ರೌಢಶಾಲೆಗಳು ಮತ್ತು ಕುರುಂಜಿಭಾಗ್‌ನಲ್ಲಿರುವ ಎಂಟು ಹಾಸ್ಟೆಲ್‌ಗಳು ಶ್ರೀ ಗೌಡರಿಗೆ ಶಿರಬಾಗಿ ನಮಿಸುತ್ತಿವೆ.

ಕೊಡಗು, ದ. ಕನ್ನಡ, ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಹರಡಿಕೊಂಡಿರುವ 14ಕ್ಕೂ ಅಧಿಕ ಕಲ್ಯಾಣ ಮಂಟಪಗಳು ಶ್ರೀಯುತರು ಮಾಡಿದ ದಾನದ ಸಂಕೇತವಾಗಿ ತಲೆ ಎತ್ತಿ ನಿಂತಿವೆ

1995ರಲ್ಲಿ ಶ್ರೀ ಕೆ. ವಿ.ಜಿ. ತಾಂತ್ರಿಕ ಶಿಕ್ಷಣ ಸಂಸ್ಥೆ (ITI) ಭಾಗಮಂಡಲದಲ್ಲಿ ಸ್ಥಾಪನೆಗೊಂಡು ಕಾರ್ಯನಿರ್ವಹಿಸುತ್ತಿದೆ. ಅಲ್ಲದೆ ಇಲ್ಲಿ ಇವರ ಪ್ರಥಮ ದರ್ಜೆಕಾಲೇಜು ಇಂದು ಖ್ಯಾತಿ ಪಡೆದಿದೆ.

ಮಡಿಕೇರಿ, ಸೋಮವಾರಪೇಟೆ, ಭಾಗಮಂಡಲದ ಕಲ್ಯಾಣ ಮಂಟಪಗಳಿಗೆ ದಾನ ನೀಡಿದ್ದೇ ಅಲ್ಲದೆ ಮೂರ್ನಾಡಿನಲ್ಲಿ ತಮ್ಮ ಧರ್ಮಪತ್ನಿಯವರ ಹೆಸರಿನಲ್ಲಿ ಭವ್ಯವಾದ ಕಲ್ಯಾಣಮಂಟಪವನ್ನು ಕಟ್ಟಿಸಿದ್ದಾರೆ.

ಶ್ರೀಯುತರ 60ನೇ ಜನ್ಮದಿನದಂದು ಹಲವಾರು ಗಣ್ಯರು ಶುಭಕೋರಿ ಸಂದೇಶ ಕಳುಹಿಸಿದ್ದಾರೆ "... ಅವರು ಕಟ್ಟಿದ ವಿದ್ಯಾಸಂಸ್ಥೆಗಳ ವಿದ್ಯಾರ್ಥಿಗಳೆಲ್ಲರೂ 'ವಿಶ್ವಮಾನವ'ರಾಗಿ ಸರ್ವತೋಮುಖ ಪ್ರಗತಿಯನ್ನು ಹೊಂದಲಿ" ಎಂದು ಕುವೆಂಪುರವರು ಹಾರೈಸಿದ್ದರು.

"ಶ್ರೀ ಕುರುಂಜಿ ವೆಂಕಟರಮಣಗೌಡರು ಸಮಾಜಾಭಿವೃದ್ಧಿ ಕಾರ್ಯಗಳಲ್ಲಿ ಹೆಸರಾಂತ ಸೇವೆ ಸಲ್ಲಿಸಿ ಸುಳ್ಯ ತಾಲೂಕಿಗೇ ಅಲ್ಲದೆ ಕನ್ನಡ ಹಾಗೂ ಕರ್ನಾಟಕ ರಾಜ್ಯದ ಅನೇಕ ಕಡೆಗಳಲ್ಲಿ ಅನೇಕ ಜನ ಹಿತ ಕಾರ್ಯಗಳಲ್ಲಿ ಪ್ರಮುಖ ಪಾತ್ರ ವಹಿಸಿರುವುದು ಜನಜನಿತವಾಗಿದೆ. ಇವರ ಸೇವಾ ಮನೋಭಾವ, ತ್ಯಾಗಬುದ್ಧಿ ಹಾಗೂ ಸಮಾಜ ಸುಧಾರಣಾ ವ್ಯಕ್ತಿತ್ವ ಮುಂತಾದವುಗಳು ಇವರನ್ನು ಆದರ್ಶ ವ್ಯಕ್ತಿಯನ್ನಾಗಿ ಮಾಡಿದೆ.... ಪರಮಾತ್ಮನು ಇವರ ಕುಟುಂಬ ವರ್ಗಕ್ಕೆ ಮಂಗಳ ಆಶೀರ್ವಾದ ಮಾಡುತ್ತಿರಲಿ" ಎಂದು ಶುಭಾಶಯ ಕೋರಿದವರು ಸಿ.ಎಂ. ಪೂಣಚ್ಚನವರು.

ಶ್ರೀಯುತರ ಬಗ್ಗೆ ಬರೆದ ಲೇಖನವೊಂದರಲ್ಲಿ ಎ.ಆರ್ ಬಶೀರ್ ಅಹಮದ್ ಅವರು

"ವರ್ಷ ವರ್ಷಕೆ ಮೇಲೆ ನಿಂತಿರಿ ನೀವು
ವರ್ಷ ವರ್ಷಕೆ ಕೀರ್ತಿ ಪಡೆದಿರಿ ನೀವು
ಹರ್ಷವನ್ನು ತಂದಿರಿ ಜನಮನಕೆ ನೀವು
ಬಾಳಿ ಬೆಳಗಿರಿ ಮುದದಿ ಶತವರ್ಷನೀವು"ಎಂದು ಹಾರೈಸಿದ್ದಾರೆ.

ನೂರಕ್ಕೊಬ್ಬ ವೀರನಾಗಬಹುದು, ಸಾವಿರಕ್ಕೊಬ್ಬ ಪಂಡಿತನಾಗಬಹುದು, 10ಸಾವಿರಕ್ಕೊಬ್ಬ ವಾಕ್ಯ ವಿಶಾರದನಾಗಬಹುದು. ಲಕ್ಷಕ್ಕೊಬ್ಬ ಆದರ್ಶ ಶಿಕ್ಷಕನಾಗಬಹುದು. ಆದರೆ ಕೊಡುಗೈ ದಾನಿಯೊಬ್ಬ ಜನಿಸುವುದು ತೀರಾ ಅಪರೂಪ ಈ ಅತ್ಯಪೂರ್ವರಲ್ಲಿ ಶ್ರೀ ಕೆ. ವಿ. ಜಿ. ಯವರೊಬ್ಬರು.

ದಾನಿ ಎಂದೆಂದೂ ಚಿರಂಜೀವಿ. ನಿಮ್ಮ ಭಾಗ್ಯದ ಬಟ್ಟಲು ಅಕ್ಷಯವಾಗಲಿ, ಅಮರವಾಗಲಿ, ಸದಾ ಹರಿಯುವ ಅಮರ ಗಂಗೆಯಾಗಲಿ.

ಶ್ರೀವೆಂಕಟರಮಣ ಗೌಡರಿಗೆ ಸಂದ ಪ್ರಶಸ್ತಿಗಳು,

1. ಕಾರಂತ ಪರಿಸರ ರತ್ನ
2. ರಾಜೀವ್ ಗಾಂಧಿ ಏಕತಾ ಪ್ರಶಸ್ತಿ
3. ಗ್ಲೋರಿ ಆಫ್ ಇಂಡಿಯಾ ಇಂಟರ್ ನ್ಯಾಷನಲ್
4. ಆರ್ಟ್ ಆಫ್ ಇಂಡಿಯಾ ಗೋಲ್ಡ್-98
5. ನ್ಯಾಶನಲ್ ಎಜುಕೇಶನ್ ಎಕ್ಸಲೆನ್ಸ್

**ಬಿ. ಆರ್. ಜೋಯಪ್ಪ**

## ಪತ್ರಕರ್ತ ಜನಪರ ನಿಲುವು ಹೊಂದಿರಬೇಕು

ಪತ್ರಕರ್ತ ಜನಸಾಮಾನ್ಯರ ಬಗ್ಗೆ ಕಾಳಜಿ ವಹಿಸುವುದರ ಜೊತೆಗೆ ಪಕ್ಷಾತೀತನಾಗಿದ್ದು ಜಾತ್ಯತೀತ ನಿಲುವನ್ನು ಪ್ರತಿಪಾದಿಸುವವನಾಗಿರಬೇಕು ಎಂದು ಕರ್ನಾಟಕ ರಾಜ್ಯ ಕಾರ್ಯನಿರತ ಪತ್ರಕರ್ತರ ಸಂಘದ ರಾಜ್ಯಾಧ್ಯಕ್ಷ ಹಾಗೂ ಹಿರಿಯ ಪತ್ರಕರ್ತ ಬಿ.ವಿ. ಮಲ್ಲಿಕಾರ್ಜುನಯ್ಯ ತಿಳಿಸಿದರು.

ಅವರು ಉಡುಪಿಯಲ್ಲಿ ಉಡುಪಿ ಜಿಲ್ಲಾ ಕಾರ್ಯನಿರತ ಪತ್ರಕರ್ತರ ಸಂಘದ ಆಶ್ರಯದಲ್ಲಿ ನಡೆದ ಪತ್ರಕರ್ತರ ಸಂಘಟನೆ, ಪತ್ರಕರ್ತರ ಸಮಸ್ಯೆ ಹಾಗೂ ಸವಾಲುಗಳು ಹಾಗೂ ಪತ್ರಕರ್ತ ಲೇಖಕ-ಓದುಗರ ಸಂವಾದ ಕಾರ್ಯಕ್ರಮದಲ್ಲಿ ಮಾತನಾಡುತ್ತಿದ್ದರು.

ನಿಜವಾಗಿಯೂ ಪತ್ರಕರ್ತರಿಗೆ ಸ್ವಾತಂತ್ರ್ಯವಿದೆಯೇ ಎಂಬುದರ ಬಗ್ಗೆ ಹಲವಾರು ಘಟನೆಗಳನ್ನು ಉಲ್ಲೇಖಿಸಿದ ಅವರು, ಪತ್ರಕರ್ತರು ಸತ್ಯಸಂಗತಿಗಳನ್ನು ವರದಿ ಮಾಡುವ ಬಗ್ಗೆ ಹೆಚ್ಚಿನ ಗಮನಹರಿಸಬೇಕೆಂದು ಹೇಳಿದರು.

ಟಿ. ವಿ. ಇಂಟರ್‌ನೆಟ್‌ಗಳ ಹಾವಳಿಯಿಂದ ಪತ್ರಿಕಾ ರಂಗಕ್ಕೆ ಯಾವುದೇ ತೊಂದರೆಗಳಿಲ್ಲ. ಪತ್ರಿಕೆಯವರು ಸ್ಥಳೀಯ ಸುದ್ದಿಗಳ ಬಗ್ಗೆ ಹೆಚ್ಚಿನ ಮಹತ್ವ ಕೊಡುವುದು ಒಳ್ಳೆಯದು ಎಂದು ಅವರು ತಿಳಿಸಿದರು.

ಎ.ಎಸ್.ಎನ್. ಹೆಬ್ಬಾರ್, ಡಾ. ಮುರಾರಿ ಬಲ್ಲಾಳ್, ಪ್ರೊ. ಶ್ರೀಪತಿ ತಂತ್ರಿ, ಮುರಲೀಧರ ಉಪಾಧ್ಯಾಯ, ಭಾಸ್ಕರ ರಾವ್ ಮೊದಲಾದವರು ಈ ಸಂದರ್ಭದಲ್ಲಿ ಮಾತನಾಡಿದರು.

ಸಂಘದ ಅಧ್ಯಕ್ಷ ದಾಮೋದರ ಐತಾಳ್, ಶಿಕಾರಿಪುರ ಈಶ್ವರ ಭಟ್ ಕೆಲವು ಸಲಹೆ ಸೂಚನೆ ನೀಡಿದರು. ದಾಮೋದರ ಐತಾಳ ಸ್ವಾಗತಿಸಿ, ಶಿಕಾರಿಪುರ ವಂದಿಸಿದರು.

ರಾತ್ರಿ ಕಂಡ ಬಾವಿಗೆ ಹಗಲು ಬಿದ್ದ ಹಾಗೆ

# ಮಹಿಳೆಯರಿಗಾಗಿ ಸ್ತ್ರೀಶಕ್ತಿ, ರೈತರಿಗೆ ಕೃಷಿ ಆಯೋಗ (ನೂತನ ಯೋಜನೆಗಳು)

ಸ್ತ್ರೀಶಕ್ತಿ, ಸುರಕ್ಷ ಹೆರಿಗೆ, ಕೃಷಿ ಆಯೋಗ, ರೈತ ಮಿತ್ರ, ಜಲ ಸಂವರ್ಧನ, ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ, ಸ್ವಚ್ಛ ಗ್ರಾಮ, ಎರಡನೇ ಆರ್ಥಿಕ ಆಯೋಗ, ಯುವಕಾಮ್, ರೇಷ್ಮೆ ಸಂಪತ್ತು, ಸಾರ್ವಜನಿಕ ಉದ್ಯಮ ಸುಧಾರಣಾ ಆಯೋಗ, ಕರ್ನಾಟಕ ರೈಲ್ವೆ ಅಭಿವೃದ್ಧಿ ನಿಗಮ, ಶಾಸಕರ ಕ್ಷೇತ್ರ ಅಭಿವೃದ್ಧಿ ನಿಧಿ, ಕರ ವಿವಾದ ಸಮಾಧಾನ, ಏಕ ಕಾಲಿಕ ಇತ್ಯರ್ಥ ಯೋಜನೆ.

ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು ತಮ್ಮ ಚೊಚ್ಚಲು ಮುಂಗಡ ಪತ್ರದಲ್ಲಿ ರೂಪಿಸಿರುವ ನೂತನ ಯೋಜನೆಗಳಿವು.

ಸ್ವಸಹಾಯ ಗುಂಪು ಯೋಜನೆಯಡಿಯಲ್ಲಿ ಮಹಿಳೆಯರಿಗೆ ಸಾಲ ಸೌಲಭ್ಯ ಒದಗಿಸುವ ಉದ್ದೇಶದಿಂದ ಸ್ತ್ರೀ ಶಕ್ತಿ ಎನ್ನುವ ನೂತನ ಯೋಜನೆಯನ್ನು ಜಾರಿಗೆ ತರಲು ಉದ್ದೇಶಿಸಲಾಗಿದೆ. ಮೊದಲ ವರ್ಷದಲ್ಲಿ ಒಂದು ಲಕ್ಷ ಮಹಿಳಾ ಸ್ವಸಹಾಯ ತಂಡಗಳಿಗೆ ಸಾಲ ಒದಗಿಸಲಾಗುತ್ತದೆ. ಮೊದಲ ವರ್ಷವೇ 50ಕೋಟಿ ರೂ. ಗಳಿಗೂ ಹೆಚ್ಚು ಹಣವನ್ನು ಆವರ್ತ ನಿಧಿಯನ್ನಾಗಿ ನೀಡಲಿದೆ. ಮುಖ್ಯಮಂತ್ರಿಗಳ ಅಧ್ಯಕ್ಷತೆ ಯಲ್ಲಿನ ಉನ್ನತ ಸಮಿತಿಯು ಈ ಯೋಜನೆಯ ವಿಶಾಲ ಮಾರ್ಗದರ್ಶಿ ಸೂತ್ರಗಳನ್ನು ಮಂಡಿಸಲಿದೆ. ಜಿಲ್ಲಾಧಿಕಾರಿಗಳ ಮೂಲಕ ಈ ಯೋಜನೆಯನ್ನು ಜಾರಿಗೊಳಿಸಲಾಗುವುದು.

ಅಂಗನವಾಡಿ ಕಾರ್ಯಕರ್ತೆಯರು ಮೂಲತಃ ಈ ಕಾರ್ಯತಂಡಗಳ ಸಂಚಾಲಕರಾಗಿರುತ್ತಾರೆ.

ಅನೈರ್ಮಲ್ಯ ವಿಧಾನದಲ್ಲಿ ಹೆರಿಗೆ ಮಾಡಿಸುವುದು ಹಳ್ಳಿಗಳಲ್ಲಿನ ಶಿಶು ಮರಣ ಹೆಚ್ಚಾಗಲು ಕಾರಣವಾಗಿದ್ದು ಇದನ್ನು ತಡೆಗಟ್ಟಲು ಗ್ರಾಮೀಣ ಮಹಿಳೆಯರಿಗೆ ಸೋಂಕು ರಹಿತ ಹೆರಿಗೆ ಕಿಟ್‌ಗಳನ್ನು ಉಚಿತವಾಗಿ ವಿತರಿಸುವ ಸುರಕ್ಷ ಹೆರಿಗೆ ಎಂಬ ನೂತನ ಯೋಜನೆಯನ್ನು ಜಾರಿಗೆ ತರಲು ಉದ್ದೇಶಿಸಲಾಗಿದೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮೂಲಕ ಮಿಡ್‌ವೈಫ್‌ಗಳಿಗೆ ಹೆರಿಗೆ ಕಿಟ್‌ಗಳನ್ನು ವಿತರಿಸಲಾಗುತ್ತದೆ. ಈ ಯೋಜನೆಗಾಗಿ ವಾರ್ಷಿಕ ಒಂದು ಕೋಟಿ ರೂ.ಗಳ ಸಹಾಯಧನವನ್ನು ನೀಡಲಾಗುತ್ತದೆ.

ರಾಜ್ಯದ ಕೃಷಿ ಅಭಿವೃದ್ಧಿಗಾಗಿ ಕೃಷಿ ಆಯೋಗವನ್ನು ಸ್ಥಾಪನೆ ಮಾಡಲಾಗುತ್ತದೆ. ಇದು ರಾಜ್ಯದಲ್ಲಿರುವ ವಿವಿಧ ಕೃಷಿ ಹವಾಮಾನ ವಲಯಗಳಲ್ಲಿನ ಬೆಳೆಗಳ ಸದ್ಯದ ಉತ್ಪಾದಕತೆ ಹಾಗೂ ಉತ್ಪಾದಕತಾ ಸಾಮರ್ಥ್ಯದ ನಡುವೆ ಇರುವ ಕಂದಕವನ್ನು ನಿವಾರಿಸಲು ಕಾರ್ಯತಂತ್ರವನ್ನು ರೂಪಿಸಲಿದೆ. ಕೇಂದ್ರ ಸರಕಾರದ ರಾಷ್ಟ್ರೀಯ ಕೃಷಿ ವಿಮೆ ಯೋಜನೆಯಲ್ಲಿ ಪಾಲ್ಗೊಳ್ಳುವ ಸಲುವಾಗಿ ಒಂದು ನೂರು ಕೋಟಿ ರೂ. ಗಳನ್ನು ಒದಗಿಸಲಾಗುತ್ತದೆ.

ರಾಜ್ಯದ ಎಲ್ಲ 745 ಹೋಬಳಿ ಕೇಂದ್ರಗಳಲ್ಲಿ ರೈತ ಸಂಪರ್ಕ ಕೇಂದ್ರಗಳನ್ನು ಸ್ಥಾಪಿಸುವ ರೈತ ಮಿತ್ರ ನೂತನ ಯೋಜನೆಯನ್ನು ಆರಂಭಿಸಲಾಗುತ್ತದೆ. ಈ ಕೇಂದ್ರಗಳು ರೈತರ ಮನೆ ಬಾಗಿಲಿಗೆ ಕೃಷಿಗೆ ಸಂಬಂಧಿಸಿದ ವೈಜ್ಞಾನಿಕ ಮತ್ತು ತಾಂತ್ರಿಕ ಸಲಹೆಗಳನ್ನು ತಲುಪಿಸಲಿದೆ.

ರಾಜ್ಯದಲ್ಲಿರುವ ಕೆರೆಗಳ ಹೂಳು ತೆಗೆಸುವ ಮೂಲಕ ಉದ್ಯೋಗಾವಕಾಶವನ್ನು ಒದಗಿಸಲು ವಿಶ್ವಬ್ಯಾಂಕ್ ನೆರವಿನಲ್ಲಿ ಜಲ ಸಂವರ್ಧನ ಯೋಜನೆಯನ್ನು ರೂಪಿಸಲಾಗುತ್ತದೆ. ಮುಂದಿನ ಐದು ವರ್ಷದಲ್ಲಿ 25 ಸಾವಿರ ಕೆರೆಗಳ ಹೂಳು ತೆಗೆದು ಮುಂದಿನ ಐದು ವರ್ಷಗಳಲ್ಲಿ ಪುನರುಜ್ಜೀವನಗೊಳಿಸಲಾಗುವುದು.

ವಸತಿ ಸೌಲಭ್ಯ ಕಲ್ಪಿಸಲು ಹಾಗೂ ಸಾಮಾಜಿಕ ವಸತಿಗಾಗಿ ಅಗತ್ಯ ಸಂಪನ್ಮೂಲ ಸಂಗ್ರಹಿಸಲು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮವನ್ನು ಸ್ಥಾಪಿಸಲಾಗುತ್ತದೆ. ಈ ನಿಗಮದ ಮೂಲಕ ಆಶ್ರಯ, ಅಂಬೇಡ್ಕರ್ ಯೋಜನೆಯಡಿ ಒಂದು ವರ್ಷದಲ್ಲಿ ಎರಡು ಲಕ್ಷ ಮನೆಗಳನ್ನು ನಿರ್ಮಿಸಲಾಗುತ್ತದೆ.

ಹಳ್ಳಿಗಳ ಸಂಪೂರ್ಣ ನೈರ್ಮಲ್ಯಕ್ಕೆ ಒತ್ತು ನೀಡುವ ಸಲುವಾಗಿ ಸ್ವಚ್ಛ ಗ್ರಾಮ ಯೋಜನೆಯನ್ನು ಜಾರಿಗೆ ತರಲಾಗುತ್ತದೆ. ಹಳ್ಳಿಗಳ ಒಳ ರಸ್ತೆ ನಿರ್ಮಾಣ, ಒಳ ಚರಂಡಿ, ಸಮುದಾಯ ಗೊಬ್ಬರ ಗುಂಡಿಗಳ ನಿರ್ಮಾಣ ಹಾಗೂ ಕುಟುಂಬ ಶೌಚಾಲಯಗಳು ಸೇರಿವೆ. ಈ ಯೋಜನೆಗಾಗಿ 20 ಕೋಟಿ ರೂ. ಗಳ ಅನುದಾನವನ್ನು ನಿಗದಿಗೊಳಿಸಿದ್ದು ಹುಡ್ಕೊ ಸಂಸ್ಥೆಯ ವತಿಯಿಂದ 160ಕೋಟಿ ರೂ. ಗಳ ಸಾಲದ ನೆರವು ಲಭ್ಯ ವಾಗಲಿದೆ. ಆರಂಭಿಕ ವರ್ಷದಲ್ಲಿ ಒಂದು ಸಾವಿರ ಗ್ರಾಮಗಳನ್ನು ಯೋಜನೆಯಡಿಯಲ್ಲಿ ಒಳಪಡಿಸಲಾಗುತ್ತದೆ.

ಯುವ ಜನತೆಗೆ ಮಾಹಿತಿ ತಂತ್ರಜ್ಞಾನದಲ್ಲಿ ತರಬೇತಿ ನೀಡಲು ಯುವ ಕಾಮ್ ಎಂಬ ಯೋಜನೆಯನ್ನು ಜಾರಿಗೆ ತರಲು ಸರಕಾರ ಉದ್ದೇಶಿಸಿದೆ. ರಾಜ್ಯದ 225 ವಿಧಾನಸಭಾ ಕ್ಷೇತ್ರಗಳಲ್ಲಿ ತಲಾ ಒಂದು ತರಬೇತಿ ಕೇಂದ್ರಗಳನ್ನು ಸ್ಥಾಪಿಸಿ ಅದರ ಮೂಲಕ ಒಂದು ಲಕ್ಷ ವಿದ್ಯಾವಂತ ಯುವಕರಿಗೆ ಮಾಹಿತಿ ತಂತ್ರಜ್ಞಾನ ಸಂಬಂಧಿತ ಸೇವೆಗಳಲ್ಲಿ ತರಬೇತುಗೊಳಿಸಲಾಗುತ್ತದೆ. ಜುಲೈ ಒಂದರಿಂದ ಬೆಳಗಾವಿ, ಬೀದರ್, ಚಿತ್ರದುರ್ಗ ಮತ್ತು ಮಂಡ್ಯ ಗಳಲ್ಲಿ ಯುವಕಾಮ್‌ಗಳು ಮೊದಲ ಹಂತವಾಗಿ ಆರಂಭವಾಗಲಿವೆ.

ರೇಷ್ಮೆ ಬೆಳೆಯುವ ಪರಿಶಿಷ್ಟ ಜಾತಿ ಮತ್ತು ಪಂಗಡದವರು, ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಹಾಗೂ ಅಂಗವಿಕಲರಿಗೆ ನೆರವು ನೀಡುವ ಸಲುವಾಗಿ ರೇಷ್ಮೆ ಸಂಪತ್ತು ಯೋಜನೆಯನ್ನು ಜಾರಿಗೆ ತರಲಾಗುತ್ತಿದೆ.

ರಾಜ್ಯದಲ್ಲಿರುವ ಸಾರ್ವಜನಿಕ ಉದ್ದಿಮೆಗಳ ಕಾರ್ಯ ನಿರ್ವಹಣೆ ನಷ್ಟದಲ್ಲಿದ್ದು ಅವು ಸರಕಾರಿ ಖಜಾನೆಗೆ ಹೊರೆಯಾಗದಂತೆ ಮಾಡುವ ಸಲುವಾಗಿ ಸಲಹೆ ಹಾಗೂ ಶಿಫಾರಸ್ಸುಗಳನ್ನು ನೀಡಲು ಸಾರ್ವಜನಿಕ ಉದ್ಯಮ ಸುಧಾರಣಾ ಆಯೋಗವನ್ನು ರಚಿಸಲಾಗುತ್ತಿದೆ.

ರಾಜ್ಯದ ರೈಲ್ವೆ ಯೋಜನೆಗಳು ಪರಿಣಾಮಕಾರಿ ಜಾರಿಗೆ ತರುವ ಉದ್ದೇಶದಿಂದ 26ರಷ್ಟು ಈಕ್ವಿಟಿಯನ್ನು ಐಡೆಕ್ ಮೂಲಕ ನೀಡಿ ಕರ್ನಾಟಕ ರೈಲು ಅಭಿವೃದ್ಧಿ ನಿಗಮವನ್ನು ಸ್ಥಾಪನೆ ಮಾಡಲು ಉದ್ದೇಶಿಸಲಾಗಿದೆ. ಐಡಿಎಫ್‌ಸಿ ಮತ್ತು ಹೂಡ್ಕೋಗಳು ಈ ಜಂಟಿ ಉದ್ಯಮದಲ್ಲಿ ಪಾಲುದಾರ



20ನೇ ಪುಟಕ್ಕೆ

# ಶತಮಾನ ಕಂಡ ಮೇರು ವ್ಯಕ್ತಿಗಳು :

ಸಂಪುಟ 4 ಸಂಚಿಕೆ 2ರಲ್ಲಿ ಶತಮಾನ ಕಂಡ ಅರೆಭಾಷಿಕರ ಮೇರು ವ್ಯಕ್ತಿಗಳು ಎಂಬ ಶಿರೋನಾಮೆಯಡಿಯಲ್ಲಿ ಜನಾಂಗದ ಮೇರು ವ್ಯಕ್ತಿಗಳ ಪಟ್ಟಿ ಮಾಡಲು ಸಂಗಾತಿ ಬಯಸಿತ್ತು. ಅದರಂತೆ ಈ ಕೆಳಗಿನ ಅರ್ಹರನ್ನು ಮೇರು ವ್ಯಕ್ತಿಗಳನ್ನಾಗಿ ಗುರುತಿಸಲಾಗಿದೆ.ನಮ್ಮ ಕರೆಗೆ ಓಗೊಡದೆ ಹಲವು ವ್ಯಕ್ತಿಗಳ ಹೆಸರು ಬಿಟ್ಟು ಹೋಗಿರಲಿಕ್ಕೂ ಸಾಕು. ಅದಕ್ಕೆ ಸಂಗಾತಿ ವಿಷಾಧಿಸುತ್ತದೆ. ಸಹಕರಿಸಿದ ಸರ್ವರಿಗೂ ಸಂಗಾತಿ ವಂದನೆಗಳನ್ನು ಅರ್ಪಿಸುತ್ತದೆ.

**19 ನೇ ಶತಮಾನದ ಅರೆಭಾಷೆ ಗೌಡ ಜನಾಂಗದ ಶ್ರೇಷ್ಠ ವ್ಯಕ್ತಿಗಳು :**

ದಿ|| ಗುಡ್ಡೆಮನೆ ಅಪ್ಪಯ್ಯಗೌಡ ಮತ್ತು ದಿ|| ಕೆದಂಬಾಡಿ ರಾಮೈಯ್ಯಗೌಡ.

**20ನೇ ಶತಮಾನದ ಅರೆಭಾಷೆ ಗೌಡ ಜನಾಂಗದ ಶ್ರೇಷ್ಠ ವ್ಯಕ್ತಿಗಳು :**

| | | |
|---|---|---|
| ದಿ|| ಕುಂಬಗೌಡನ ಕುಶಾಲಪ್ಪ | ದಿ|| ನಿಡ್ಯಮಲೆ ರಾಮಪ್ಪ | ದಿ|| ನಿಡ್ಯಮಲೆ ಮುದ್ದಪ್ಪ |
| ದಿ|| ನಿಡ್ಯಮಲೆ ಸೋಮಣ್ಣ | ದಿ|| ದಂಬೆಕೋಡಿ ಸುಬ್ರಾಯ | ದಿ|| ಪೇರಿಯನ ಪೂವಯ್ಯ |

## ಅರೆಭಾಷೆಗೌಡರ ಶತಮಾನದ ವ್ಯಕ್ತಿ : ಶ್ರೀ ಕುರುಂಜಿ ವೆಂಕಟರಮಣಗೌಡರು.

**ಅರೆಭಾಷೆ ಗಲುಡ ಜನಾಂಗದ 19ನೇ ಶತಮಾನದ ಅಗ್ರಗಣ್ಯರು (1837ರ ಸ್ವಾತಂತ್ರ್ಯ ವೀರರು) :**

| | | |
|---|---|---|
| ದಿ|| ಗುಡ್ಡೆಮನೆ ಅಪ್ಪೈಯ್ಯಗೌಡ | ದಿ|| ಕೆದಂಬಾಡಿ ರಾಮೈಯ್ಯಗೌಡ | ದಿ|| ಗುಡ್ಡೆಮನೆ ತಮ್ಮಯ್ಯಗೌಡ |
| ದಿ|| ಕುರುಂಜಿ ಸುಬ್ಬೈಯ್ಯ ಗೌಡ | ದಿ|| ಕೂಜುಗೋಡು ಮಲ್ಲಪ್ಪ ಗೌಡ | ದಿ|| ಕುಕ್ಕುನೂರು ಚೆನ್ನೈಯ್ಯ ಗೌಡ |
| ದಿ|| ಮಣೆಯನ ರಂಗಪ್ಪ | ದಿ|| ಕುಂಚಡ್ಕ ತಿಮ್ಮ | ದಿ|| ದೇರಾಜೆ ಬಚ್ಚ |
| ದಿ|| ಗುಡ್ಡದ ತಿಮ್ಮಪ್ಪ | ದಿ|| ಕುಡೆಕಲ್ಲು ಪುಟ್ಟ | ದಿ|| ಮಡಿಯಾಲ ತಿಮ್ಮ |
| ದಿ|| ಅಡ್ಕಾರು ಅಣ್ಣೆಗೌಡ | ದಿ|| ಕೂಜುಗೋಡು ಅಪ್ಪಯ್ಯಗೌಡ | ದಿ|| ಕೋಚನ ದೊಡ್ಡೈಯ್ಯ (1837ರಲ್ಲಿ ಬ್ರಿಟೀಷರ ಪರ ವಹಿಸಿದ ವೀರ) |

**ಸಮಾಜ ಸೇವಕರು :-**

| | | |
|---|---|---|
| ದಿ|| ನಿಡ್ಯಮಲೆ ಮುತ್ತಣ್ಣನವರು | ದಿ|| ಯಂಕನ ಸುಬ್ರಾಯನವರು | ದಿ|| ಬಂಟೊಡಿ ಲಿಂಗಪ್ಪಗೌಡರು |
| ದಿ|| ತೆಕ್ಕಡೆ ಮುತ್ತಣ್ಣನವರು | ದಿ|| ಕೋಚನ ಸಣ್ಣಯ್ಯ | ದಿ|| ಬಳ್ಳಡ್ಕ ದೇವಪ್ಪ |
| ದಿ|| ನರಿಯಾರ ರಾಮಣ್ಣ ಪಠೇಲರು | ದಿ|| ಕೋಚನ ಸುಬ್ಬಪ್ಪ | ದಿ|| ಕರ್ಣಯ್ಯನ ಕರುಂಬಯ್ಯ |
| ದಿ|| ಯಂಕನ ತಿಮ್ಮಯ್ಯ | ದಿ|| ಪೂಜಾರಿ ಪೂವಯ್ಯನವರು | ದಿ|| ಮುಂಡೋಡಿ ಪಠೇಲ್ ತಿಮ್ಮಪ್ಪ ಗೌಡರು |
| ದಿ|| ದಂಬೆಕೋಡಿ ನಂಜಪ್ಪನವರು | ದಿ|| ಕುಂಭುಗೌಡನ ಅಪ್ಪಯ್ಯನವರು | ದಿ|| ಉಳುವಾರನ ಕುಶಾಲಪ್ಪ |
| ದಿ|| ಪಟ್ಟಡ ಮಂದಣ್ಣ | ದಿ|| ಕೋರನ ಮಾದಯ್ಯ | ದಿ|| ಉಳುವಾರನ ಅಪ್ಪಯ್ಯ |
| ದಿ|| ಪೊಡನೊಳಂಡ್ರ ಐಯ್ಯಪ್ಪ | ದಿ|| ಉಳುವಾರನ ಅಣ್ಣಯ್ಯ | ದಿ|| ಕೋಚನ ಅಪ್ಪಯ್ಯ |
| ದಿ|| ಮಲ್ಲಾರ ಮ್ಯಾಲಪ್ಪಗೌಡರು | ದಿ|| ಪೇಲತಡ್ಕ ದುಗ್ಗಪ್ಪಗೌಡರು | ದಿ|| ಅಡ್ಕಾರು ರಾಮಣ್ಣಗೌಡರು |
| ದಿ|| ಗೂನಡ್ಕ ಗುಡ್ಡಪ್ಪ ಗೌಡರು | ದಿ|| ತೆಕ್ಕಡೆ ಪೂವಯ್ಯ | ದಿ|| ದೇವರ ಗುಂಡ ತ್ಯಾಂಪಣ್ಣಗೌಡ |
| ದಿ|| ಕುಯಿಂತೋಡು ಸುಬ್ರಾಯ ಗೌಡ | ದಿ|| ಕೂಜುಗೋಡು ಕುಶಾಲಪ್ಪಗೌಡರು | ದಿ|| ಚಂಡೀರ ಬೆಳ್ಯಪ್ಪ |
| ದಿ|| ಕುಯಿಂತೋಡು ಪದ್ಮಯ್ಯ ಗೌಡರು | ದಿ|| ನಡುಬೆಟ್ಟು ಸಣಯ್ಯ ಗೌಡರು | ದಿ|| ಕುಡಕಲ್ಲು ಮುತ್ತಣ ಗೌಡರು |
| ದಿ|| ನಂಜೇಗೌಡನ ಸಣಯ್ಯ ಪಠೇಲರು | ದಿ|| ಪಟ್ಟಡ ಮುತ್ತಣನವರು | ದಿ|| ನಂಗಾರು ಮುತ್ತಣನವರು. |

**ವಿದ್ಯಾಸಂಘದ ಪ್ರಥಮ ಅಧ್ಯಕ್ಷರಾಗಿ ಸಮಾಜ ಸೇವೆಗೈದವರು :-**

| | | |
|---|---|---|
| ದಿ|| ಕುಂಬು ಗೌಡನ ಕುಶಾಲಪ್ಪ | - | ಪಾರುಪತ್ತೆಗಾರ, ಪ್ರಥಮ ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರು. |
| ದಿ|| ನಿಡ್ಯಮಲೆ ರಾಮಪ್ಪ | - | ಪಾರುಪತ್ತೆಗಾರ, ಪ್ರಥಮ ದಕ್ಷಿಣ ಕನ್ನಡ ಜಿಲ್ಲಾ ವಿದ್ಯಾಸಂಘದ ಅಧ್ಯಕ್ಷರು. |

**ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರು:-**

| | | | | | |
|---|---|---|---|---|---|
| ದಿ|| ತೆಕ್ಕಡೆ ಸುಬ್ಬೈಯ್ಯ | ಕೊ.ಗೌ.ವಿ.ಸ.ಅ | ದಿ|| ಕೆದಂಬಾಡಿ ಸುಬ್ರಾಯ | " | ದಿ|| ತೆಕ್ಕಡೆ ಕಾಳಪ್ಪ | " |
| ದಿ|| ಕೋರನ ಮಾದಪ್ಪ | " | ದಿ|| ಪೊಡನೊಳಂಡ ಐಯ್ಯಪ್ಪ | " | ದಿ|| ಮೂಟೇರ ಅಣ್ಣಯ್ಯ | " |
| ದಿ|| ಕರ್ಣಯ್ಯನ ಅಪ್ಪಚ್ಚ | " | ದಿ|| ಚೆರಿಯಮನೆ ಕುಶಾಲಪ್ಪ | " | ದಿ|| ಕೆದಂಬಾಡಿ ಮುದ್ದಪ್ಪ | " |

ಉರಿಯುವ ಬೆಂಕಿಗೆ ತುಪ್ಪ ಹಾಕಿದಂಗೆ

| | | |
|---|---|---|
| ದಿ|| ಯಂಕನ ಅಂಣಯ್ಯ " | ದಿ|| ಶಿರಕಜೆ ಪೊನ್ನಪ್ಪ " | ದಿ|| ಕೆದಂಬಾಡಿ ಅಪ್ಪಚ್ಚ " |
| ದಿ|| ದಂಬೆಕೋಡಿ ಅಪ್ಪಚ್ಚ " | ದಿ|| ಉಳುವಾರನ ಕುಶಾಲಪ್ಪ " | ದಿ|| ತೆಕ್ಕಡೆ ಆನಂದಯ್ಯ " |
| ದಿ|| ಬಡ್ಡನ ಮುತ್ತಂಣ " | ದಿ|| ಚೆರಿಯಮನೆ ಪೊನ್ನಪ್ಪ " | ದಿ|| ತೋಟಂಬೈಲು ಮಾದಪ್ಪ " |
| ದಿ|| ಪೈಕೇರ ಚಂಗಪ್ಪ " | ದಿ|| ಪೇರಿಯನ ಪೂವಯ್ಯ " | ದಿ|| ದಂಬೆಕೋಡಿ ಸುಬ್ರಾಯ " |
| ದಿ|| ಕೆದಂಬಾಡಿ ರಾಮೈಯ್ಯ " | ದಿ|| ತೋಟಂಬೈಲು ಚಂಗಪ್ಪ " | ದಿ|| ಪಾಂಡನ ಸುಬ್ಬಯ್ಯ " |
| ದಿ|| ಕುದುಪಜೆ ಕೃಷ್ಣಪ್ಪ " | ಶ್ರೀ ಹೊಸೂರು ಜೋಯಪ್ಪ " | ಶ್ರೀ ಕುಯ್ಯಮುಡಿ ಪೂರ್ಣಯ್ಯ " |

| | | |
|---|---|---|
| ಶ್ರೀ ತೋಟಂಬೈಲು ನಾಣಯ್ಯ | - | ಅಧ್ಯಕ್ಷರು, ಕೊಡಗು ಗೌಡ ಸಮಾಜ, ಮಡಿಕೇರಿ |
| ಶ್ರೀ ಪೂಜಾರಿ ಮೊಣ್ಣಪ್ಪ | - | ಹಾಲಿ, ಅಧ್ಯಕ್ಷರು, ದ. ಕನ್ನಡ ಮತ್ತು ಕೊಡಗು ಗೌಡ ಸಮಾಜ, ಬೆಂಗಳೂರು |
| ಶ್ರೀ ಪಡ್ಡಂಬೈಲು ವೆಂಕಟರಮಣ ಗೌಡ | - | ದ. ಕನ್ನಡ ಗೌಡ ವಿದ್ಯಾ ಸಂಘ, ಅಧ್ಯಕ್ಷರು |
| ದಿ|| ಡಾ|| ಕೆ. ವೀರಪ್ಪಗೌಡ | - | ದ.ಕ. ಮತ್ತು ಕೊಡಗು ಗೌಡ ಸಮಾಜ, ಬೆಂಗಳೂರು |
| ಶ್ರೀ ದಂಬೆಕೋಡಿ ಆನಂದ | - | ಹಾಲಿ, ಅಧ್ಯಕ್ಷರು, ದ.ಕ. ಮತ್ತು ಕೊಡಗು ಗೌಡ ಸಮಾಜ, ಬೆಂಗಳೂರು |
| ಶ್ರೀ ತೋಟಂಬೈಲು ಬೆಳ್ಯಪ್ಪ, | - | ಕೊಡಗು ಗೌಡ ಸಮಾಜ, ಬೆಂಗಳೂರು. |
| ಶ್ರೀ ಕೆ. ಲಕ್ಷ್ಮಣ ಗೌಡ | - | ಮಾಜಿ, ಅಧ್ಯಕ್ಷರು, ಕೆಂಪೆಗೌಡ ರೂರಲ್ ಹೌಸಿಂಗ್ ಬೋರ್ಡ್, ಬೆಂಗಳೂರು. |
| ಶ್ರೀ ನಂಗಾರು ರಾಮಯ್ಯ ನಾಣಯ್ಯ | - | ಹಾಲಿ, ಅಧ್ಯಕ್ಷರು, ಕೆಂಪೆಗೌಡ ರೂರಲ್ ಹೌಸಿಂಗ್ ಬೋರ್ಡ್, ಬೆಂಗಳೂರು. |
| ಶ್ರೀ ಪೊಕ್ಕುಲಂಡ್ರ ಕೆ. ಸುಬ್ಬಯ್ಯ | - | ಮಾಜಿ, ಅಧ್ಯಕ್ಷರು, ಗೌಡ ಸಂಘ, ಮಂಗಳೂರು. |
| ಶ್ರೀ ಕೆಮ್ಮಾರ ಬಾಲಕೃಷ್ಣ ಗೌಡ | - | ಸಮಾಜ ಸೇವಕರು (ದ.ಕ) |
| ದಿ|| ಕೋಡಿ ಮೇದಪ್ಪ | - | ಸಮಾಜ ಸೇವಕರು, ಚೆಟ್ಟಿಮಾನಿ. |
| ಶ್ರೀ ಕೊಂಪುಳಿ ಸೋಮಪ್ಪ | - | ಮಾಜಿ ಅಧ್ಯಕ್ಷರು, ಗೌಡ ಸಮಾಜ, ಕುಶಾಲನಗರ |
| ಶ್ರೀ ಕೋರನ ಪೂಣಚ್ಚ | - | ಅಧ್ಯಕ್ಷರು, ಕುಶಾಲನಗರ ಗೌಡ ಸಮಾಜ, ಅಧ್ಯಕ್ಷರು ಗೌಡ ಅಭಿವೃದ್ಧಿ ಸಂಘ, (ಕೊಡಗು + ದ.ಕ) ಉಪಾಧ್ಯಕ್ಷರು, ಕೊಡಗು ಗೌಡ ಸಮಾಜ.ಮಡಿಕೇರಿ |
| ಶ್ರೀ ಬೈಲೋಳಿರ ಕಾರ್ಯಪ್ಪ | - | ಸಮಾಜ ಸೇವಕರು, ಮೈಸೂರು |
| ಶ್ರೀ ಶಿರಕಜೆ ದೇವಯ್ಯ | - | ಸಮಾಜ ಸೇವಕರು, ಮೈಸೂರು |
| ಶ್ರೀ ನಡುಬೆಟ್ಟು ಆನಂದ | - | ಸಮಾಜ ಸೇವಕರು, ಮೈಸೂರು |
| ಶ್ರೀ ಪಟ್ಟಡ ಪ್ರಭಾಕರ | - | ಸ್ಥಾಪಕ ಗೌರವ ಸಂಪಾದಕರು, ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು. ನಿರ್ದೇಶಕರು, ಕೊಡಗು ಗೌಡ ವಿದ್ಯಾಸಂಘ, ನಿರ್ದೇಶಕರು, ಗೌಡ ಅಕಾಡೆಮಿ, ಮಡಿಕೇರಿ, ನಿರ್ದೇಶಕರು, ಮಾಜಿಸೈನಿಕರ ಕ್ಷೇಮಾಭಿವೃದ್ಧಿ ಸಂಘ, ಮೈಸೂರು. ಉಪಾಧ್ಯಕ್ಷರು, ಮಾಜಿ ಸೈನಿಕರ ನರ್ಸರಿ ಸ್ಕೂಲ್, ಮಂಡ್ಯ |
| ಶ್ರೀ ಅಮ್ಮಾಜೀರ ಎಸ್. ಪೊನ್ನಪ್ಪ | - | ಕಾವೇರಿನಾಡು ವಿದ್ಯಾ ಸಂಸ್ಥೆ, ಕಾವೇರಿ ನಾಡು ಸಹಕಾರ ಸಂಸ್ಥೆ, ಕಾವೇರಿ ನಾಡು ಸಾಂಸ್ಕೃತಿಕ ಅಕಾಡೆಮಿ, ಬೆಂಗಳೂರು |
| ಕೊಡಗು ಗೌಡ ವಿದ್ಯಾಸಂಘ | - | ಮಡಿಕೇರಿ - 1908 |
| ಕೊಡಗು ಮತ್ತು ದ. ಕನ್ನಡ ಗೌಡಸಮಾಜ | - | ಬೆಂಗಳೂರು - 1962 |
| ಕೊಡಗು ಗೌಡ ಮಹಿಳಾ ಒಕ್ಕೂಟ, | - | ಮಡಿಕೇರಿ - 1997 |
| ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ | - | ಮಡಿಕೇರಿ - 1997 |
| ಕೊಡೆಕಲ್ಲ್ ಕುಟುಂಬಸ್ತರು | - | ಮಡಿಕೇರಿ ಹುಡುಗಿಯರ ಹಾಸ್ಟೆಲ್‌ಗೆ ಮರದಾನಿಗಳು. |
| ಕೊಡಗುಗೌಡ ವಿದ್ಯಾರ್ಥಿನಿಲಯ, | - | ಮೈಸೂರು - 1972 |

## ರಾಜಕೀಯ :

| | | |
|---|---|---|
| ದಿ|| ನಿಡ್ಯಮಲೆ ಸೋಮಣ್ಣ | - | ಪ್ರಥಮ Ex. M.P.-1952 |
| ದಿ|| ಪಾಂಡನ ಸುಬ್ಬಯ್ಯ | - | Ex. M.L.A. |
| ದಿ|| ಕೋರನ ದೇವಯ್ಯ | - | Ex. MLA |
| ದಿ|| ಕೂಜುಗೋಡು ಸುಬ್ರಮಣ್ಯಗೌಡ | - | Ex. MLA - |
| ಶ್ರೀ ದಂಬೆಕೋಡಿ ಚಿಣ್ಣಪ್ಪ | - | Ex. Minister (ಪ್ರಥಮ) |
| ಶ್ರೀ ದಂಬೆಕೋಡಿ ಮಾದಪ್ಪ | - | Ex. MLA- ಮಡಿಕೇರಿ |

ಅಂಗ್ಯೆ ಹುಣ್ಣಿಗೆ ಕನ್ನಡಿ ಯಾಕೆ?

| | | |
|---|---|---|
| ಶ್ರೀ ದೇವರ ಗುಂಡ ಸದಾನಂದ ಗೌಡ | - | MLA- ಪುತ್ತೂರು |
| ಶ್ರೀ ಊರುಬೈಲು ಜಯಪ್ರಕಾಶ್ | - | ಪ್ರಥಮ ಜಿಲ್ಲಾ ಪಂಚಾಯತ್ ಅಧ್ಯಕ್ಷರು. |
| ಶ್ರೀಮತಿ ಅಮೆ ಕಮಲ ಗಣಪತಿ | - | ಪ್ರಥಮ ಜಿಲ್ಲಾ ಪಂಚಾಯತ್ ಉಪಾಧ್ಯಕ್ಷೆ. |
| ದಿ. ಹೊದ್ದೇಟಿ ವೆಂಕಪ್ಪ | - | ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು |
| ದಿ. ಹುದೇರಿ ಉತ್ತಪ್ಪ | - | ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷರು |
| ಶ್ರೀಮತಿ ಕೋಳುಮುಡಿಯನ ಪಾರ್ವತಿ ರಾಮಯ್ಯ | - | ಪ್ರಥಮ ತಾಲೂಕು ಬೋರ್ಡ್ ಮಹಿಳಾ ಸದಸ್ಯೆ |
| ಶ್ರೀ ಮುಕ್ಕಾಟಿರ ವಾಸುದೇವ | - | ಪ್ರಥಮ ಮಡಿಕೇರಿ ಪುರ ಸಭಾಧ್ಯಕ್ಷ |
| ಶ್ರೀ ದೊಡ್ಡಡ್ಕ ಬಾಲಕೃಷ್ಣ | - | ತಾಲ್ಲೂಕು ಪಂಚಾಯತ್ ಅಧ್ಯಕ್ಷರು |

## ಸ್ವಾತಂತ್ರ್ಯ ಹೋರಾಟಗಾರರು

ದಿ|| ಪೂಜಾರಿಮನೆ ರಾಮಪ್ಪ
ದಿ|| ಪೋರೆಯನ ಮಂದಣ್ಣ
ದಿ|| ಕೆದಂಬಾಡಿ ಗಣಪತಿ
ದಿ|| ಚೆರಿಯಮನೆ ಪೊನ್ನಪ್ಪ
ದಿ|| ಚೆಟ್ಟಿಮಾಡ ಚಿಣ್ಣಪ್ಪ

## ಕಾನೂನು

| | | |
|---|---|---|
| ದಿ|| ಸೋಣಂಗೇರಿ ಚಿಣ್ಣಪ್ಪಗೌಡ | - | ಪ್ರಥಮ ಬಿ. ಎ. ಮತ್ತು ವಕೀಲರು. |
| ದಿ|| ನಿಡ್ಯಮಲೆ ಮುದ್ದಪ್ಪ | - | ಪ್ರಥಮ ನ್ಯಾಯಾಧಿಶ |
| ದಿ|| ಮಾವಾಜಿ ಜನಾರ್ಧನ | - | ಅಡ್ವೋಕೇಟ್ ಜನರಲ್, ಕರ್ನಾಟಕ, |
| ಶ್ರೀ ಕುರಿಯ ಚಾಮಯ್ಯ | - | ಕರ್ನಾಟಕ ರಾಜ್ಯ ಕಾನೂನು ಕಾರ್ಯದರ್ಶಿ |
| ಕುಮಾರಿ ಅಚ್ಚಾಂಡಿರ ನವೀನ ಕುಮಾರಿ | - | ಪ್ರಥಮ ಮಹಿಳಾ ನ್ಯಾಯಾಧಿಶೆ. |
| ಶ್ರೀಮತಿ ಕೆದಂಬಾಡಿ ಶಾಂತಿ | - | ನ್ಯಾಯಾಧೀಶೆ |
| ಶ್ರೀ ಯು.ಕೆ. ಚೆನ್ನಕೇಶವ | - | ನ್ಯಾಯಾಧೀಶರು |
| ಶ್ರೀ ನೈಯ್ಯಣೀರ ಗೋಪಾಲ್ ದಿನೇಶ್ | - | ನ್ಯಾಯಾಧಿಶರು |
| ಶ್ರೀ ನಿಡ್ಯಮಲೆ ವಿ. ಪ್ರಕಾಶ್ | - | ಕರ್ನಾಟಕ ರಾಜ್ಯದ ಹೆಚ್ಚುವರಿ ಸರ್ಕಾರಿ ಅಭಿಯೋಜಿತರು |
| ಶ್ರೀ ಚೆಟ್ಟಿಮಾಡ ರವೀಂದ್ರ | - | ಪಬ್ಲಿಕ್ ಪ್ರಾಸಿಕ್ಯೂಟರ್. |

## ಆರ್ಮಿ / ಪೋಲಿಸ್ ಪಶಸ್ತಿ

| | | |
|---|---|---|
| ದಿ|| ಕ್ಯಾಪ್ಟನ್ ಕುಯ್ಯಮುಡಿ ಸುಬ್ಬಯ್ಯ | - | ಇಂಡಿಯನ್ ಆರ್ಮಿ |
| ದಿ|| ಮೇಜರ್ ಶಿರಕಜೆ ರಾಮಪ್ಪ | - | ಮೆನ್ಸ್‌ನೆನ್ಸ್ ಇನ್ ಡಿಸ್‌ಪ್ಯಾಚ್ (ಆರ್ಮಿ) |
| ಶ್ರೀ ಕುದುಪಜೆ ಭೈರಪ್ಪ | - | ರಾಷ್ಟ್ರಪತಿಗಳ ಚಿನ್ನದ ಪದಕ (ಪೋಲಿಸ್) |
| ಶ್ರೀ ಬೈತಡ್ಕ ಅಯ್ಯಪ್ಪ ಜೋಯಪ್ಪ | - | " " " |
| ಶ್ರೀ ಅಮೆ ಸೀತಾರಾಮ್ | - | " " " |
| ಶ್ರೀ ಪಟ್ಟಡ ಕೃಷ್ಣಪ್ಪ ಕುಶಾಲಪ್ಪ | - | " "(ರಾಷ್ಟ್ರಪತಿಗಳ ಶಿಪಾರಸ್ಸಿಗಾಗಿಕಳುಹಿಸಿದೆ) |

## ಸಿನಿಮಾ, ನಾಟಕ / ಯಕ್ಷಗಾನ.

| | | |
|---|---|---|
| ಶ್ರೀ ನಂಜೇಗೌಡನ ದೇವಿಪ್ರಸಾದ್, ಸಂಪಾಜೆ | - | ನಿರ್ಮಾಪಕ, ಚಿತ್ರ ಮೂರು ದಾರಿಗಳು |
| ಶ್ರೀ ಕೋರಿಯಾರ್ ರವಿಕುಮಾರ್ | | ನಿರ್ಮಾಪಕ, ಚಿತ್ರ ನಟ, ಲವ್ ಇನ್ ನೇಪಾಲ್ |
| ಶ್ರೀಮತಿ ಕುಯ್ಯಮುಡಿ ಅನಿತಾರಾಣಿ | - | ಪ್ರಥಮ ಚಿತ್ರನಟಿ |
| ಶ್ರೀಮತಿ ಗೀತಾ ಮೊಂಟಡ್ಕ | - | ಕರ್ನಾಟಕದ ಏಕೈಕ ಮಹಿಳಾ ಮಿಮಿಕ್ರಿ |
| ಶ್ರೀ ಕೇದಗಡಿ ಗುಡ್ಡಪ್ಪ ಗೌಡ | - | ಯಕ್ಷಗಾನ |
| ಶ್ರೀ ಬೈತಡ್ಕ ಕುಂಞಪ್ಪ ಶಶಿಧರ | - | ಮೂಕಾಭಿನಯ |
| ಶ್ರೀ ಅಮ್ಮಾಜೀರ ಪೊನ್ನಪ್ಪ | - | ಅರೆಭಾಷೆ ಕ್ಯಾಸೆಟ್, ಟಿ.ವಿ. ಡ್ಯಾನ್ಸರ್, |

## ಕೈಗಾರಿಗೆ

| | | |
|---|---|---|
| ಶ್ರೀ ಕೋರಿಯಾರ್ ರವಿಕುಮಾರ್ | - | ರಾಷ್ಟ್ರ ಪ್ರಶಸ್ತಿ, ಭಾರತ್ ಶ್ರೀ ಮತ್ತು ಭಾರತ್ ಗೌರವ್ |
| ಶ್ರೀ ಪಳ್ಳಿಪುರ ಭರತ್ | - | ರಾಜ್ಯ ಪ್ರಶಸ್ತಿ ವಿಜೇತ |

ಕಳ್ಳನನ್ನು ನಂಬಿದರೂ ಕುಳ್ಳನನ್ನು ನಂಬಬಾರದು.

## ಪ್ರತಿಭೆ, ಯುವಜನ

ಶ್ರೀ ಕೊಂಪುಳಿರ ಗಣೇಶ್ ಬೋಪಯ್ಯ, - ಜಿಲ್ಲಾ ಯುವಜನ ಪ್ರಶಸ್ತಿ
ಶ್ರೀ ಹಾರಂಬಿ ರವಿಕುಮಾರ್ - ಜಿಲ್ಲಾ ನೆಹರು ಯುವಜನ ಪ್ರಶಸ್ತಿ

## ವಿಜ್ಞಾನಿ

ಶ್ರೀ ನಿಡ್ಯಮಲೆ ಮಾಧವ - ಸಾಗರ ವಿಜ್ಞಾನಿ, ನವದೆಹಲಿ

## ಇಂಡಿಯನ್ ಸಿವಿಲ್ ಸರ್ವಿಸ್ (I.A.S.)

ಶ್ರೀ ಕೋಳಿಬೈಲು ಅಚ್ಚಯ್ಯ ಬೆಳ್ಯಪ್ಪ (IAS) - ಭಾಗಮಂಡಲ
ಶ್ರೀ ಹರೀಶ್ ಗೌಡ (IAS) - ಸುಳ್ಯ (PUC Board Director)

## ವಿದ್ಯಾಕ್ಷೇತ್ರದ ಅಪೂರ್ವ ಸಾಧನೆ

ದಿ. ನಂಗಾರು ಅಪ್ಪಣ್ಣ - ಕೈಸಾಲೆ ಪಾಠಶಾಲೆ, ಕೋರಂಗಾಲ
ದಿ. ಪಟ್ಟಡ ಬಿದ್ದಪ್ಪ, - ಪಟ್ಟಡ ಸ್ಕೂಲ್, ಬೆಟ್ಟಗೇರಿ. (1911ರಲ್ಲಿ ಸ್ಥಾಪನೆ. ನಂತರ ಈಗ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ)
ದಿ. ಕರ್ಣೆಯ್ಯನ ಅಂಣಯ್ಯ - ಕರ್ಣೆಯ್ಯನ ಸ್ಕೂಲ್, ಕುಂಬಳದಾಳ್, (1912ರಲ್ಲಿ ಸ್ಥಾಪನೆ ಈಗ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ)
ದಿ. ನಂಗಾರು ಮುತ್ತಣ್ಣ - ಹುಲ್ಲು ಚಾವಡಿ ಪಾಠಶಾಲೆ, ಕೋರಂಗಾಲ. (1929 ರಲ್ಲಿ ಸ್ಥಾಪನೆ, ನಂತರ ಈಗ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ)
ದಿ ಹುದೇರಿ ಬೆಳ್ಯಪ್ಪ - ಗೋಳಿಕಟ್ಟೆ ಪಾಠಶಾಲೆ, ಮದೆ
ಶ್ರೀ ಕುರುಂಜಿ ವೆಂಕಟರಮಣ ಗೌಡ - K. V. G. ವಿದ್ಯಾಸಂಸ್ಥೆ, ಸುಳ್ಯ
ಶ್ರೀ ನಂಗಾರು ಸಾಣಯ್ಯ - ಲಿಟ್ಲ್ ಪ್ಲವರ್ ಇಂಗ್ಲೀಷ್ ಸ್ಕೂಲ್, ಬೆಂಗಳೂರು.
ಶ್ರೀ ಅಮ್ಮಾಜೀರ ಪೊನ್ನಪ್ಪ - ಕಾವೇರಿ ನಾಡು ವಿದ್ಯಾ ಸಂಸ್ಥೆ, ಬೆಂಗಳೂರು.
ಶ್ರೀ ಕುಟ್ಟನ ಮುತ್ತಪ್ಪ - T.C.H. ಮಡಿಕೇರಿ, 1972

## ವಿದ್ಯಾಕ್ಷೇತ್ರದಲ್ಲಿ ಪ್ರಶಸ್ತಿ

ದಿ. ಪಟ್ಟಡ ತಿಮ್ಮಯ್ಯ ಮಾದಪ್ಪ - 1969, ಮುಖ್ಯ ಮಂತ್ರಿಗಳ ರಾಜ್ಯ ಪ್ರಶಸ್ತಿ.
ಶ್ರೀ ಸೂದನ ರಾಘುವಯ್ಯ - 1981
ಶ್ರೀ ತೊತ್ತಿಯನ ಮಂದಣ್ಣ - 1998 " "
ಶ್ರೀಮತಿ ಐಯಂಡ್ರ ಪಾರ್ವತಿ - 1998 ಉತ್ತಮ ಶಿಕ್ಷಕಿ ಜಿಲ್ಲಾ ಪ್ರಶಸ್ತಿ
ಶ್ರೀ ದಂಬೆಕೋಡಿ ಜಯರಾಮ್ - 1999, ಉತ್ತಮ ದೈಹಿಕ ಶಿಕ್ಷಕ ಜಿಲ್ಲಾ ಪ್ರಶಸ್ತಿ
ಶ್ರೀ ಕೆದಂಬಾಡಿ ಸುಬ್ಬಯ್ಯ ಪುಟ್ಟಯ್ಯ - 1999, ಉತ್ತಮ ಶಿಕ್ಷಕ, ಜಿಲ್ಲಾ ಪ್ರಶಸ್ತಿ

## ಪ್ರತಿಭೆ

ಶ್ರೀ ಅಂಬೆಕಲ್ಲು ಮುತ್ತಯ್ಯಗೌಡ - ಜಾಯಿಂಟ್ ರಿಜಿಸ್ಟ್ರರ್ ಆಫ್ ಕೋ ಆಪರೇಟಿವ್, ಕರ್ನಾಟಕ ರಾಜ್ಯ
ಶ್ರೀ ಹರಗದ ಮುತ್ತಣ್ಣ - ಉಪ ನಿರ್ದೇಶಕರು, ಪಶುಪಾಲನಾ ಇಲಾಖೆ
ಶ್ರೀ ಕಾಳೇರಮ್ಮನ ಬೋಪಯ್ಯ ಗೋಪಾಲ ಕೃಷ್ಣ - ಉಪ ನಿರ್ದೇಶಕರು, " "
ಶ್ರೀ ಗುಡ್ಡೇರ ಗಣಪತಿ ಕುಮಾರಪ್ಪ - ಉಪ ನಿರ್ದೇಶಕರು, ಕೃಷಿ ಇಲಾಖೆ.
ಶ್ರೀ ಕೆದಂಬಾಡಿ ಮುದ್ದಪ್ಪ - " " "

## ಕ್ರೀಡಾರಂಗ

ಶ್ರೀ ಹೊಸೂರು ಕುಕ್ಕಪ್ಪ ಸೀತಾರಾಮ್ - 1982, ಮೆರಾಥಾನ್, ಏಷ್ಯಾಡ್‌ನಲ್ಲಿ ಕಂಚಿನ ಪದಕ.
ಶ್ರೀ ಹೊಸೊಕ್ಲು ಅಪ್ಪಚ್ಚು ಚಿಣ್ಣಪ್ಪ - 1997 ಆಲ್ ಇಂಡಿಯಾ ಮೆರಾಥಾನ್ ಓಟದಲ್ಲಿ 7ನೇ ಸ್ಥಾನ
ಶ್ರೀ ನಂಗಾರು ಪೊನ್ನಪ್ಪ ದಯಾನಂದ - ರಾಷ್ಟ್ರೀಯ ಡೆಕಾತ್ಲನ್‌ನಲ್ಲಿ ಚಿನ್ನದ ಪದಕ (ಸಿವಿಲ್)
ಶ್ರೀ ಉಳುವಾರ ದೀಪಕ್ - ಖೋ ಖೋ, ಏಕಲವ್ಯ ಪ್ರಶಸ್ತಿ
ಶ್ರೀ ಬೆಪ್ಪುರನ ಅಣ್ಣಾಪ್ಪಕುಮಾರ್ - ರಾಷ್ಟ್ರೀಯ ಪುಟ್ಬಾಲ್ ಆಟಗಾರ

ಮಾಡುವವನ ಪಾಪ ಆಡುವವನ ಬಾಯಲ್ಲಿ

| | | |
|---|---|---|
| ಕುಮಾರಿ ಹುಲಿಮನೆ ಮಂಜುಳ | - | ರಾಷ್ಟ್ರೀಯ ಹಾಕಿ, ಜೂನಿಯರ್ ಮಹಿಳಾ ಪ್ರತಿನಿಧಿ |
| ಕಟ್ಟೆಮನೆ ಪ್ರವೀಣ್‌ಕುಮಾರ್ | - | ವಾಲಿಬಾಲ್ , ರಾಷ್ಟ್ರೀಯ ಜೂನಿಯರ್ ಪ್ರತಿನಿಧಿ |
| ಪೂಜಾರಿ ಎಂ. ಆನಂದ | - | ರಾಷ್ಟ್ರೀಯ ಓಟಗಾರ,ಚಿನ್ನದ ಪದಕ ವಿಜೇತ |
| ಶ್ರೀ ಹುದೇರಿ ತ್ಯಾಗರಾಜೇಂದ್ರ | - | ರಾಜ್ಯಮಟ್ಟದ ಕೆಸರುಗದ್ದೆ ಓಟಗಾರ |
| ಕು. ಮುಕ್ಕಾಟಿ ನಂಜಪ್ಪ ಅನಿತ | - | ರಾಜ್ಯಮಟ್ಟದ ಅಟ್ಲೇಟ್ಸ್ |

## ಪತ್ರಿಕಾ ರಂಗ

| | | |
|---|---|---|
| ಶ್ರೀ ಸೂದನ ಸುಬ್ಬಯ್ಯ ಈರಪ್ಪ | - | 1985, ಗೌಡ ಧ್ವನಿ, ಅರೆಭಾಷೆ, ಮಾಸಿಕ |
| ಶ್ರೀ ಯಂ. ಬಿ. ಸದಾಶಿವ | - | ಚೇತನ ವಾರಪತ್ರಿಕೆ, ಸುಳ್ಯ |
| ಶ್ರೀ ವೆಂಕಟ್ ದಂಬೆಕೋಡಿ | - | ಚೇತನ ವಾರಪತ್ರಿಕೆ, ಸುಳ್ಯ |
| ಶ್ರೀ ದಂಬೆಕೋಡಿ ಮುದ್ದಪ್ಪ | - | 1985, ಸೂಜಿ ವಾರ ಪತ್ರಿಕೆ |
| ಡಾ\|\| ಶಿವಾನಂದ ಊರುಬೈಲು | - | ಸುದ್ದಿ ಬಿಡುಗಡೆ, ಸುಳ್ಯ, ವಾರಪತ್ರಿಕೆ, |
| ಶ್ರೀಮತಿ ಪಟ್ಟಡ ಪ್ರಭಾಕರ ಶೀಲಾಮಣಿ | - | 1997, ಕೊಡಗು ಸಂಗಾತಿ, ಪಾಕ್ಷಿಕ, ಮೈಸೂರು |
| ಶ್ರೀ ಬಡ್ಡನ ರಾಜ್‌ಚಂಗಪ್ಪ | - | 1998, ರಾಷ್ಟ್ರೀಯ ಪುರಸ್ಕಾರ(ಉಪ ಸಂಪಾದಕ, ಇಂಡಿಯಾ ಟುಡೇ) |

## ಸಾಹಿತ್ಯ / ಸಾಹಿತಿ, ಕವಿ.

| | | |
|---|---|---|
| ವಿಧ್ವಾನ್ ಕೊಳಂಬೆ ಪುಟ್ಟಣ್ಣ ಗೌಡ | - | ಸಾಹಿತ್ಯ |
| ಪ್ರೊ\|\| ಕೋಡಿಕುಶಾಲಪ್ಪ ಗೌಡ | - | ಸಾಹಿತ್ಯ, ಸಂಶೋಧನೆ |
| ವಿಧ್ವಾನ್ ಪಿ. ಜಿ. ಮುಡೂರ್ | - | ಕನ್ನಡ ಸಾಹಿತಿ |
| ಡಾ\|\| ಕೆ. ವಿ. ವೆಂಕಟರಮಣ | - | ಆಂಗ್ಲ ಸಾಹಿತಿ |
| ಡಾ\|\| ಕೆ. ಚಿನ್ನಪ್ಪ ಗೌಡ | - | ಜಾನಪದ ಸಾಹಿತ್ಯ |
| ಡಾ\|\| ಚಿದಾನಂದ ಕೊಳಂಬೆ | - | ಕಂಪ್ಯೂಟರ್ ಕ್ಷೇತ್ರ |
| ಡಾ\|\| ಪುರುಶೋತ್ತಮ ಬಿಳಿಮಲೆ | - | ಸಾಹಿತ್ಯ, ಸಂಶೋಧನೆ |
| ಪ್ರೊ\|\| ಪೂಜಾರಿ ಮೊಣ್ಣಪ್ಪ | - | ಸಾಹಿತಿ, ಕನ್ನಡ, ಅರೆಭಾಷೆ |
| ಶ್ರೀ ಬಾರಿಯಂಡ ಜೋಯಪ್ಪ | - | ಸಾಹಿತಿ, ಕನ್ನಡ , ಅರೆಭಾಷೆ |
| ಶ್ರೀ ಮಂಡೆಕೋಲು ಗಂಗಾಧರ್ ಗೌಡ(ವಾಣಿ ಕುಮಾರ್) | - | ಸಾಹಿತಿ,ಕವಿ. |
| ಶ್ರೀ ಅಂಬೆಕಲ್ಲು ಪುಟ್ಟಣ್ಣ ಗೌಡ | - | ಕನ್ನಡ ಸಾಹಿತಿ |
| ದಿ\|\| ಕೋಟೆರ ಸ. ಕಾರ್ಯಪ್ಪ | - | ಸಂಗ್ರಹ ಬರಹಗಾರ |
| ಶ್ರೀ ಕುಲ್ಲಚನ ಕಾರ್ಯಪ್ಪ | - | ಸಾಹಿತಿ,ಕವಿ, |

## ಸಂಘಟನೆ / ಐಕ್ಯತೆ / ಏಕತೆ

| | | |
|---|---|---|
| ಶ್ರೀ ಮಾವಾಜಿ ಬಾಲಕೃಷ್ಣಗೌಡ | - | 1985, ಗೌಡ ಸಮ್ಮೇಳನದ ರೂವಾರಿ. |
| ಶ್ರೀ ನಂಜೇಗೌಡನ ದೇವಿ ಪ್ರಸಾದ್ | - | ಅಧ್ಯಕ್ಷರು ಪ್ರಜಾವೇದಿಕೆ, ಕೊಡಗು |
| ಶ್ರೀ ಕುರುಂಜಿ ವೆಂಕಟರಮಣ ಗೌಡ | - | 1996ರ ಗೌಡ ಸಮ್ಮೇಳನದ ರೂವಾರಿ |
| ಶ್ರೀ ಕುದುಪಜೆ ಬಿ. ಕೃಷ್ಣಪ್ಪ | - | 1985ರ ಕೊಡಗಿನ ರೂವಾರಿಗಳು |
| ಶ್ರೀ ಪಂಜಿಪಳ್ಳ ಯಂ. ವೆಂಕಪ್ಪ | - | 1985 + 1996 " " |
| ಶ್ರೀಮತಿ ಪಂಜಿಪಳ್ಳ ವೆಂಕಪ್ಪ ಇಂದ್ರಾಕ್ಷಿ | - | 1985 + 1996 " " |
| ಶ್ರೀ ಆಜಡ್ಕ ಕೃಷ್ಣಪ್ಪ, ಕಾರ್ಯದರ್ಶಿ | - | 1985 " " |
| ಕೋಳುಮುಡಿಯನ ಅನಂತ್ ಕುಮಾರ್, ಕಾರ್ಯದರ್ಶಿ, ಸಂಚಾಲಕ | | 1985 + 1996 " " |
| ಶ್ರೀ ಸೂರ್ತಲೆ ಸೋಮಣ್ಣ | - | 1985 + 1996 " " |
| ದಿ\|\| ಮೊಟ್ಟೇರ ಜಗದೀಶ | - | 1985, 1996 " " |
| ಶ್ರೀ ಕೋಡಿ ನಂಜುಂಡ | - | 1996 |
| ಶ್ರೀ ಯಾಲದಾಳು ಸಾವಿತ್ರಿ | - | 1985, 1996 " " |
| ಶ್ರೀಮತಿ ಕೂಡಕಂಡಿ ಕಾವೇರಮ್ಮ | - | 1996, ಮಹಳಾ ಒಕ್ಕೂಟ ಕಾರ್ಯದರ್ಶಿ |
| ಶ್ರೀ ಪಟ್ಟಡ ಮುತ್ತಣ್ಣ ಪ್ರಭಾಕರ | - | 1985,1996ರ ಗೌಡ ಸಮ್ಮೇಳನದ ರೂವಾರಿ ಮತ್ತು 1997, ಕೊಡಗು ಸಂಗಾತಿ, ಮೈಸೂರು. |

**ತಾನು ಕಳ್ಳ ಪರರ ನಂಬ**

| | | |
|---|---|---|
| ಶ್ರೀ ಅಮ್ಮಾಜೀರ ಪೊನ್ನಪ್ಪ | - | 1997 ಕಾವೇರಿ ನಾಡ್, ಬೆಂಗಳೂರು |
| ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ | - | 1997, ಮಡಿಕೇರಿ. |
| ಶ್ರೀ ತುಂತಜೆ ಗಣೇಶ್ | - | 1997, ಅಧ್ಯಕ್ಷರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ |
| ಶ್ರೀ ಕೋಡಿ ಚಂದ್ರಶೇಖರ್ | - | 1997, ಕಾರ್ಯದರ್ಶಿ " " |
| ಶ್ರೀ ಗುಡ್ಡೆಮನೆ ರಮೇಶ್ | - | 1997, ಮಾಜಿ ಉಪಾಧ್ಯಕ್ಷ " " |
| ಶ್ರೀ ಪಳ್ಳಿಪುರ ಭರತ್ ಕುಮಾರ್ | - | 1997, ಮಾಜಿ ಖಜಾಂಚಿ " " |
| ಗೌಡ ಮಹಿಳಾ ಒಕ್ಕೂಟ | - | 1997, ಮಡಿಕೇರಿ. |
| ಶ್ರೀಮತಿ ಚಿಯಂಡಿ ರಾಧ ಯಾದವ | - | ಅಧ್ಯಕ್ಷೆ, ಗೌಡ ಮಹಿಳಾ ಒಕ್ಕೂಟ. ಮಡಿಕೇರಿ. |
| ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ | - | 1997, ಸಂಚಾಲಕಿ, ಗೌಡ ಮಹಿಳಾ ಒಕ್ಕೂಟ |
| ಶ್ರೀಮತಿ ದಂಬೆಕೋಡಿ ಭಾಗೀರಥಿ | - | 1999, ಅಧ್ಯಕ್ಷೆ, ಮಹಿಳಾ ಒಕ್ಕೂಟ. ಮೈಸೂರು |
| ಶ್ರೀ ತಡಿಯಪ್ಪನ ಕುಮಾರಜಯ | - | 1999,ಅಧ್ಯಕ್ಷರು, ಗೌಡ ಸಾಂಸ್ಕೃತಿಕ ಸಮಿತಿ, ಮೈಸೂರು. 2000,ಅಧ್ಯಕ್ಷರು,ಕೊಡಗುಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ,ಮೈಸೂರು. |

*ವಿ. ಸೂ:-* ಕೊಡಗು ಸಂಗಾತಿಗೆ ಬಂದ ಪತ್ರಗಳಲ್ಲದೆ ಸಂಗಾತಿ ಬಳಗ ಸಾಕಷ್ಟು ಕೂಲಂಕುಶವಾಗಿ ಪರಿಶೀಲಿಸಿ ಹಾಕಿದೆ. ಇನ್ನು ಸಾಕಷ್ಟು ಪ್ರತಿಭೆಗಳು ಹೊರಗುಳಿದಿರಬಹುದು. ಅವುಗಳು ಸಮಯಕ್ಕೆ ಸರಿಯಾಗಿ ಸ್ಪಂಧನವಾಗದ್ದರಿಂದ ಪ್ರಕಟಿಸಲಾಗಿಲ್ಲ. ಬಿಟ್ಟುಹೋಗಿದಲ್ಲಿ ಕಳುಹಿಸಿದರೆ ಅರ್ಹವಾದುವುಗಳನ್ನು ಖಂಡಿತ ಪ್ರಕಟಿಸುತ್ತೇವೆ.

**ಸಂಪಾದಕಿ**

---

## ಕಥೆ : ನಾನು

ಹೌ ಸ್ವೀಟ್ ಯು ಆರ್ ಆತ ಉದ್ಗರಿಸಿದಾಗ ನಾನು ಸಂತೋಷದ ಅಲೆಯಲ್ಲಿ ತೇಲಿ ಹೋದೆ. ಆತ ನನ್ನನ್ನೆ ದಿಟ್ಟಿಸುತ್ತ ಪ್ರಿಯೆಯನ್ನು ಕಾಯುತ್ತಿದ್ದ. ಆಕೆ ಇನ್ನು ಬಂದಿರಲಿಲ್ಲ ಆದರೆ ಈತ ಕೋಪಗೊಂಡಿರಲಿಲ್ಲ. ಶಾಂತವಾಗಿದ್ದ. ಪಾರ್ಕಿನ ಪ್ರಶಾಂತದಂತೆ. ಆಕೆ ಬಂದಳು. ಚೆಲುವೆ, ಸುಂದರಿ, ಓಡೋಡಿ ಬಂದು ಅಪ್ಪಿಕೊಂಡಳು ಈತನನ್ನು. ನನಗೆ ಕೋಪ ಬಂತು ಮೆಲ್ಲನೆ ಅಲ್ಲಿಂದ ಹೆಜ್ಜೆ ಕಿತ್ತೆ.

ಸಂಜೆಯಾಯಿತು ಚಳಿಗಾಲವಾದ್ದರಿಂದ ಮನೆಯಲ್ಲಿ ಒಬ್ಬಳೆಯಿದ್ದರಿಂದ ಹೇಗೋ ಅಮ್ಮ ದೇವರ ಬಳಿ ಹೋಗುವಾಗ ನನಗೆ ಶಾಶ್ವತವಾಗಿ ಕೊಟ್ಟು ಹೋಗಿದ್ದ ಹೊದಿಕೆಯಿಂದ ರಾತ್ರಿ ಕಳೆದೆ. ಮರುದಿನ ಬೆಳಗಾಯಿತು ನನ್ನ ಸಹಜ ಕೆಲಸವೆಲ್ಲಾ ಮುಗಿಸಿ ಪಾರ್ಕಿನತ್ತ ಹೊರಟೆ. ಅಂದು ಪಾರ್ಕಿಗೆ ಏನೋ ವಿಶೇಷ ಕಳೆ ಇತ್ತು. ನೂರಾರು ಪ್ರೇಮ ಜೋಡಿಗಳು ಅಲ್ಲಿದ್ದವು. ಎಲ್ಲರೂ ಕೆಂಪು, ಬಿಳಿ, ಕಪ್ಪು, ಬಣ್ಣದ ಬಟ್ಟೆ ಧರಿಸಿ ಓಡಾಡುತ್ತಿದ್ದರು. ಎಂದೂ ಪ್ರಶಾಂತವಾಗಿ, ನಿರ್ಜನರಿಂದ ತುಂಬಿದ್ದ ಪಾರ್ಕ್ ಇಂದು ತುಂಬಿ ತುಳುಕುತ್ತಿತ್ತು. ಓಹೋ ಅರ್ಥವಾಯಿತು ಇಂದು ಫೆಬ್ರುವರಿ 14 ಪ್ರೇಮಿಗಳ ದಿನ.

ಛೆ. ನನಗಿಲ್ಲವೆ ಆ ಭಾಗ್ಯ ಪಾರ್ಕಿನ ಬಾಗಿಲನ್ನು ದಾಟಿ ಒಳಹೋಗಲು ಮನಸಾಗದೆ ಹಿಂದಿರುಗಿದೆ. ಮನಸ್ಸಿನಲ್ಲಿ ನೂರಾರು ಭಾವನೆ ಯಾರೊಂದಿಗೆ ಹೇಳಲಿ. ಹೇಳೋಣವೆಂದರೆ ಅಮ್ಮನಿಲ್ಲ. ಸಹವರ್ತಿಗಳಿಲ್ಲ ಕೊನೆಯ ಪಕ್ಷ ಅಕ್ಕ ತಂಗಿಯರು ಅಣ್ಣ ತಮ್ಮಂದಿರಿಲ್ಲ. ಛೆ ನಾನು ಅನಾಥೆಯೇ ಸಾಧ್ಯವೇ ಇಲ್ಲ ಚಿತ್ರಗೀತೆಯ ಸಾಲುಗಳು ಹೇಳುವಂತೆ' ನಿಜವ ನೋಡು ಜಗದಿ ಅನಾಥರಾರು ಇಲ್ಲ. ತಂದೆಯಾಗಿ ಮೇಲೆ ಆ ದೇವನಿರುವಲ್ಲ. ಆದ್ರೆ ನನ್ನ ಭಾವನೆಗಳನ್ನು ಅವನೊಂದಿಗೆ ಹೇಗೆ ಹೇಳಲಿ ಅಳು ಬಂತು ಅಳುತ್ತ ಕುಳಿತರೆ ಹಸಿವು ನೀಗಲಾರದೆಂದು ಆಹಾರ ಹುಡುಕ ಹೊರಟೆ.

ಆ ದಿನ ಹೇಗೋ ಕಳೆದು ಮರುದಿನ ಬೆಳಗಾಯಿತು. ಯಾಕೋ ಉಲ್ಲಾಸ ಮೈಯಿಂದ ಹೊರ ಹೊಮ್ಮಿದೆ. ನಿತ್ಯ ಪಯಣದ ಹಾದಿ ಹಿಡಿದು ಹೊರಟೆ. ಪಾರ್ಕ್ ತಲುಪಿದೆ. ಇಂದು ಪ್ರಿಯೆ ಪ್ರಿಯಕರನಿಗಾಗಿ ಕಾಯುತ್ತಿದ್ದಳು. ನನ್ನನ್ನು ನೋಡಿದುದೇ ತಡ ನನ್ನ ಬಳಿ ಬಂದಳು ಹೌ ಬ್ಯೂಟಿಫುಲ್ ಟು ಆಯ್ ಎಂದು ಕಣ್ಣ್ ಅಗಲಿಸಿ ನಕ್ಕಳು. ನಾನು ನೀನೇ ನನಗಿಂತ ಚೆಲುವೆ ಎಂದು ಮನದಲ್ಲಿ ಹೇಳಿಕೊಂಡೆ ಆಕೆ ಕಾಯುತ್ತಿದ್ದಳು. ಒಮ್ಮೊಮ್ಮೆ ದಾರಿ ನೋಡುತ್ತಿದ್ದಳು ಮತ್ತೊಮ್ಮೆ ಗಡಿಯಾರ, ಗಮನಿಸುತ್ತಿದ್ದಳು ಸುಮಾರು ಮಧ್ಯಾಹ್ನದ ವೇಳೆಗೆ ಆತ ಬಂದ ಮುಖದ ಮೇಲೆ ಗೆಲುವಿಲ್ಲ. ಆತನನ್ನು ನೋಡಿದುದೆ ಈಕೆ ಆತನ ಬಳಿ ಸಾರಿದಳು. ಆತ ಮುಖ ಕಪ್ಪಿಟ್ಟಿತ್ತು ಮಾತುಗಳೇ ಹೊರ ಬೀಳುತ್ತಿಲ್ಲ. ಈಕೆಗೆ ಗಾಬರಿಯಾಯಿತು ಆತ ಆತನ ಮದುವೆಯ ಕರೆಯೋಲೆ ಈಕೆಯ ಕೈಗೆ ನೀಡಿದಾಗ.... ಆಕೆಗೆ ಏನೂ ತಿಳಿಯುತ್ತಿಲ್ಲ. ಬಿಚ್ಚಿನೋಡಿದ ಳದನು. ಆತನ ಹೆಸರಿನ ಮುದ್ರಿತ ಅಕ್ಷರದ ಮೇಲೆ ಅದೆಷ್ಟು ಬಾರಿ ಕಣ್ಣೋಡಿಸಿದಳೋ ಮರುಕ್ಷಣ ಕುಸಿದಳು. ಆ ಕ್ಷಣವೇ ಪ್ರಾಣ ಪಕ್ಷಿ ಹಾರಿ ಹೋಗಿರಬೇಕು. ಆತನೆಷ್ಟು ಕೂಗಿದರೂ ಮುಚ್ಚಿದ ಕಣ್ಣುಗಳು ತೆರೆಯಲೇ ಇಲ್ಲ. ನಾನಲ್ಲೆ ಇದ್ದೆ ಮೆಲ್ಲನೆ ಆತನ ಬಳಿ ಬಂದೆ ಆತ ಆಗಲೂ ಹೌ ಸ್ವೀಟ್ ಯು ಆರ್ ಎಂದಾಗ ತುಂಬಿ ಬಂದ ದುಖದಲ್ಲಿ ಮಿಯಾಂವ್......! ಎಂದೆ.

ಪೊನ್ನಚನ ಭವ್ಯ ಭೀಮಯ್ಯ,ಹಾಲೇರಿ

---

**ಪಾಪಿ ಹೋದಲ್ಲೆಲ್ಲಾ ಪಾತಾಳ**

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

**(ಹಿಂದಿನ ಸಂಚಿಕೆಂದ)** **ಧಾರಾವಾಹಿ - 8**

ರಾತ್ರಿ ಎಲ್ಲಾ ಮೈಕೈ ಬೇನೆಂದ ಬೇಗ ನಿದ್ರೆ ಬಾತ್‌ಲ್ಲೆ, ಯಾಕೆತ್ತೇಳ್ರೆ ಐದೇ ಐದ್ ನಿಮಿಷಲಿ ಆ ಪೈಲ್‌ವಾನ್ ಮೇಲೆ ಫೈಟಿಂಗ್‌ಲಿ ಗೆದ್ದ್‌ದರಂದ 21ಸಾವಿರ ರೂಪಾಯಿ ಸಂಪಾದಿಸಿದ ಸಂತೋಷನ ಪುನಃ ಪುನಃ ಮೆಲುಕು ಹಾಕಂಡೇ ಮಲಗಿತ್ತ್. ನರ್ಸ್ ನಿದ್ರೆ ಮಾತ್ರೆನ ಕೊಟ್ಟಿದ್ರೂ ಕಣ್ ಇನ್ನೂ ಮುಚ್ಚುವಂಗೆಕಾಂಬೊತಿತ್‌ಲೆ. ಆಹಾ ! ಈ ತರದ ಒಂದೊಂದೇ ಪಂಥಗಳಲ್ಲಿ ಭಾಗವಹಿಸಿರೆ ಹೆಂಗಾರ್ ಮಾಡಿ ನಾನ್ ಗೇನ ಮಾಡಿದಷ್ಟ್ ಹಣನ ಸಂಪಾದಿಸಿ ಬುಡಕ್, ಆದ್ರೇ ಅಂತಹ ಅವಕಾಶ ಸಿಕ್ಕುತ್ತನೇ ಇರುದುಲೆಲ್ಲಾ? ಹಿಂಗೇ ತಲೆ ಓಡುತಾ ಇರ್‌ಕಾಕನ ನಿದ್ದೆ ಬಂದ್ ಕಣ್ಣ್ ಮುಚ್ಚಿದೇ ಗೊತ್ತಾತ್‌ಲೆ.

ಬೆಳಕ್ ಹರ್ದ್ ಎಚ್ಚರ ಆತ್, ಪಕ್ಕದ ಬೆಡ್‌ನ ತಿರುಗಿ ನೋಡ್ರೆ ಅಲ್ಲಿಗೆ ಮಧ್ಯರಾತ್ರಿಲಿ ಕಂಡದೆ ಒಬ್ಬ ಪ್ರಜ್ಞಾಹೀನ ಪೇಶಂಟ್‌ನ ತಂದ್ ಮಲಗಿಸಿದ್ದೊ. ಅಂವಂಗೆ ಕೈ ಕಾಲು, ತಲೆಗಳ ಲೆಲ್ಲಾ ಬೇಂಡೇಜ್ ಹಾಕಿಕಟ್ಟಿದ್ದೊ. ಕೈಗೆ ಗ್ಲೂಕೋಸ್ ಡ್ರಿಪ್ ಹಾಕಿದ್ದೊ. ಇಂವನ ಚೆಕ್ ಅಪ್ ಮಾಡಿಕೆ ಬಂದಿದ್ದ ಡಾಕ್ಟರ್‌ಗ ನರ್ಸ್‌ಗ ಎಲ್ಲಾ ನೋಡಿ ಆದ ಮ್ಯಾಲೆ ಹೊರಗೆ ಹೊರಟ್ ಹೋದೋ. ಆದ್ರೇ ಐದೇ ನಿಮಿಷ ಕಳ್ದಿರ್ದು ಆ ಟೀನೇಜ್ ನರ್ಸ್ ಒಳಗೆ ಕಾಲು ಹಾಕಂಡೇ ಕಂಗ್ರಾಚ್ಯುಲೇಶನ್ ಮಿಸ್ಟರ್ ರಾಜು ತಾ ಹೇಳಿ ಇವನ ಕೈಹಿಡ್ದ್ ಶೇಖ್ ಹ್ಯಾಂಡ್ ಮಾಡ್ತ್. ಇಂವ ಒಮ್ಮೆಗೆ ಆಯ್ಯ್! ತ್ತೇಳಿ ಕಿರುಚಿಕಂಡತ್ ಬ್ಯಾಡ ಮುಟ್ಟ್ ಬೇಡನನ್ನ ಆ ಪೈಲ್‌ವಾನಂಗೆ ಗುದ್ದಿಕಾಕನ ನನ್ನ ಕೈ ಉಳಿಕೆ ಹೋಗುಟ್ಟು ತ್ತೇಳಿ ಕೈನ ಬುಡ್ಸಿಕಂಡತ್. ಮತ್ತೆ ಆಶ್ಚರ್ಯಲಿ ಕೇಳ್ತ್ ಯಾಕೆ ನನ್ನ ನೀನ್ ಕಂಗ್ರ್ಯಾಟ್ಸ್ ಮಾಡ್ತೆ? ನನ್ನ ನೋಡಿ ನೀನ್ ಕನ್‌ಫ್ಯೂಸ್ ಮಾಡಿಕಂಡೊಳ ಏನ್ ಸಮಾಚಾರ? ತಾ ತಿರುಗಿ ಪ್ರಶ್ನೆಕೇಳ್ತ್. ಆಗ ಆ ನರ್ಸ್ ಗೂಡೆ ನಗಾಡಿಕಂಡ್ ಹೊರಟೇ ಹೋತ್. ಒಂದೇ ನಿಮಿಷಕ್ಕೆ ತಿರುಗಿ ನಗೆ ಆಡಿಕಂಡೇ ಓಡಿಬಾತ್. ಓಹೋ ನನ್ನ ನೀವು ಫೂಲ್ ಮಾಡಿಕಾದುಲ್ಲೆ ಗೊತ್ತಾತಾ? ನೋಡಿಲ್ಲಿ ನಿಮ್ಮ ದೊಡ್ಡ ಸೈಜ್‌ನ ಪೋಟೋ ನೆನ್ನೆದಿನ ನೀವು ಬಾರೀ ದೊಡ್ಡ ಚಾಂಪಿಯನ್ ಪೈಲ್‌ವಾನ್‌ನ ಮೇಲೆ ಕುಸ್ತಿಲಿ ಗೆದ್ದುದರ ಹೆಂಗೆ ವರ್ಣಿಸಿ ಬರ್ದೊಳೊ. ನಿಮ್ಮ ಹೀರೋ ಸ್ಟೈಲ್ ಫೋಟೋ ಈ ಪೇಪರ್‌ಲಿ ತಾ ಅಂದ್‌ನ ಸ್ಟಾರ್ ಆಫ್ ಮೈಸೂರು ದಿನ ಪತ್ರಿಕೆನ ಕೊಡ್ತ್. ಇದರ ನೋಡ್ದ್ ಮಿಸ್ಟರ್ ರಾಜುಗೆ ಬಹಳ ಖುಷಿ ಆಗಿಹೋತ್. ಅದರಲ್ಲಿ ಬೇಗ ಬೇಗ ಕಣ್ಣಾಡಿಸಿ ಓದಿತ್. ಹಂಗೆ ಖುಷೀಲಿ ಕಣ್ಣ್ ಅರಳಿಸಿದ ಮುಖ ಒಮ್ಮೆಗೆ ಬಾಡಿ ಕಂಡ್ ಸಣ್ಣಗೆ ಆಗಿ ಹೋತ್. ಹಂಗೇ ಏನೋ ಮನ್ಸ್‌ಲಿ ಗೇನ ಮಾಡಿಕಂಡ್ ಕುದ್ದ್ ಬುಟ್ಟತ್ (ಈತರ ಸುರೂಲೇ ನನ ದೊಡ್ಡದಾದ ಪೋಟೋನ ಪ್ರಿಂಟ್ ಮಾಡಿ ಎಲ್ಲಾ ಕಡೆ ಹಂಚಿ ಹೋಗುಟಲ್ಲಾ? ಆಗಳೇ ಆಸ್ಪತ್ರೆಂದ ತಪ್ಪಸಿಕಂಡ್ ಬಂದದಕ್ಕೆ ನನ್ನ ಆ ಇಬ್ರೂ ಪೋಲಿಸ್‌ನವು ಹುಡುಕುತಾ ಒಳೊ. ನನ್ನ ಪಪ್ಪನ ಕೈಗೂ ಈ ಪತ್ರಿಕೆ ಸಿಕ್ಕಿ ಹೋಗಿ ಅವು ಕೂಡಾ ನನ್ನ ಮೈಸೂರಿಲಿ ಎಲ್ಲಾ ಕಡೆಲಿ ಹುಡುಕುವೊ. ಹಿಂಗಾದ್ರೇ ನಾನ್ ನನ್ನ ತಂಗಿನ ಮದ್ವೆಗೆ 2 ಲಕ್ಷ ಹಣನ ಸಂಪಾದಿಸಿಕೆ ಆಕಿಲೆಲ್ಲಾ? ತಾ ಮಂಕಾಗಿ ಕುದ್ದತ್.

ಆಗ ಆ ಸಿಸ್ಟರ್ ಅರ್‍ರೇ ಇದೇನ್ರೀ ನೀವು ಒಳ್ಳೆ ಮೂಡೀ ಮನುಷ್ಯರ್‍ರೀ ಸಂತೋಷ ಪಟ್ಟಕಂಬ ವಿಚಾರನ ಪೇಪರ್‌ಲಿ ಹಾಕಿರೆ ನೀವು ಬೇಜಾರು ಮಾಡಿಕಂಡ್ರಲ್ಲಾ? ಆತ್ ಬುಡಿ ಸಾರಿರೀ.. ನಿಮ್ಮ ಮನ್ಸ್‌ನ ಬೇನೆಮಾಡಿಕೆ ನಂಗೆ ಇಷ್ಟ ಇಲ್ಲೆತಾ ಅವಳೂ ಬೇಜಾರ್ ಮಾಡಿಕಂಡ್ ಅಲ್ಲಿಂದ ಹೊರಟ್ ಹೋತ್. ಆಗಳೇ ಮಿಸ್ಟರ್ ರಾಜುಗೆ ಎಚ್ಚರ ಆದ್.

ಇನ್ಸ್ ನಾನ್ ಇಲ್ಲಿ ಇರ್‌ಕ್ಕಾಗದ್. ಬೇಗ ಒಂದ್ ಬೇರೆ ವೇಷನ ಹಾಕಂಡ್ ಇಲ್ಲಿಂದ ಹಾರಕ್ಕು ದಿನಕ್ಕೊಂದು ವೇಷ ಹಾಕಂಡ್, ದಿನಕ್ಕೊಂದ್ ತರದ ಕೆಲ್ಸ ಮಾಡಿಕಂಡ್ ಬೇರೆ ಬೇರೆ ಊರುಲಿ ತಿರುಗಾಡಕ್ಕ್. ಕಳ್ಳತನ, ಸುಳ್ಳು ಹೇಳದಂಗೆ ಚಾಲೆಂಜಿಂಗ್ ರಿಸ್ಕ್‌ನ ಧೈರ್ಯಲಿ ತಕಂಡ್ರೇ ಖಂಡಿತ ಆಗಿ ಹಣಸಂಪಾದನೆ ಮಾಡಕ್ಕ್, ಕೈಯಿಲಿ ಆಗದೇ ಇದ್ದವಕೆ ಸಹಾಯನೂ ಮಾಡಕ್ಕ್. ಇದೇ ನನ್ನ ಮುಂದಿನ ಪ್ಲಾನ್, ಇದೇ ಒಳ್ಳೆ ಐಡಿಯಾ!! ಈ ವಿಚಾರಲಿ ರಾಜುನ ತಲೆ ಓಡಿಕಾಕನ ಅವಂಗೆ ಒಳ್ಳೆ ಖುಷೀ ಆತ್. ಮನ್ಸ್‌ಲೇ ತನ್ನ ಮನೆ ಗುರುನ ನೆನ್ಸ್‌ಕಂಡ್ ಬೇಗ ಅವನ ಕಟ್ಲಂದ ಎದ್ದ್ ಪಕ್ಕದ ಬೆಡ್‌ಂದ ಎರಡ್ ತಲೆ ದಿಂಬುನ, ಕಂಬ್ಳಿನ ಎಳ್‌ಕಂಡತ್. ಒಬ್ಬ ಮನುಷ್ಯ ಕಂಬ್ಳಿಹೊದ್ದ್ ಮಲಗಿಂದಂಗೆ ಮಾಡಿ ಅದರ ಮುಚ್ಚಿ ಮಡಿಗಿತ್. ಆಮೇಲೆ ಮೆಲ್ಲೆ ಅತ್ತ ಇತ್ತ ಬಗ್ಗಿನೋಡಿ ಆ ನರ್ಸ್‌ಗಳ ಕಣ್ಣ್ ತೊಪ್ಪಿಸಿ ಆಸ್ಪತ್ರೆಯ ಹಿಂದೆಗಡೆ ಗೇಟ್ ಕಡೆ ಕಾಲು ಹಾಕಿತ್. ಹಂಗೇ ಸ್ವಲ್ಪ ದೂರ ನಡ್ದ್‌ಕಂಡ್ ಹಿಂದೆ ಇರುವ ಆಟೋ ಸ್ಟ್ಯಾಂಡ್‌ಗೆ ಬಾತ್. ಅಲ್ಲಿ ಒಂದ್ ಆಟೋನ ಹಿಡ್ದ್ ಅಲ್ಲಿಂದ ನೆಟ್ಟಂಗೆ ನಂಜನ ಗೂಡು ರಸ್ತೆ ಹೊರಡುವಲ್ಲಿಗೆ ಬಂದ್ ಇಳ್ತ್. ಇಲ್ಲಿಂದ ಮುಂದಕ್ಕೆ ಮುಖ ಹಾಕಿದ ಕಡೆಗೇ ನನ್ನದಾರಿ ತ್ತೇಳಿಕಂಡ್ ನಂಜನ ಗೂಡುಕಡೆಗೆ ನಡ್‌ಕಂಡೇ ಹೊರಟತ್.

ಇತ್ತಕಡೆ 12 ಗಂಟೆಗೆ ಇನ್ನೊಂದು ರೌಂಡ್ಸ್ ಆಸ್ಪತ್ರೆಯ ಚೀಫ್ ಡಾಕ್ಟರ್ ಮೂರ್ತಿರವರೊಟ್ಟಿಗೆ ಬೇರೆ ಡಾಕ್ಟರ್‌ಗ ನರ್ಸ್‌ಗಳ ಗುಂಪು ಬಾತ್. ಇಲ್ಲಿ ಆ ಡಾಕ್ಟರ್‌ಗಳಿಗೆ ಒಂದ್ ಆಶ್ಚರ್ಯ ಕಾದಿತ್ Mr. ರಾಜುತ್ತೇಳುಂವ ಹೊದ್ದ್ ಮಲಗಿದ ಕಂಬ್ಳಿನ ನರ್ಸ್ ಗೂಡೆ ಎಳ್ದ್ ನೋಡಿರೆ ಅಲ್ಲಿ ಎರಡ್ ತಲೆದಿಂಬುನ ಮೊಡಗಿ ಮನುಷ್ಯ ಮಲಗಿದಂಗೆ ಮಾಡಿಕಂಬ್ಳಿನ ಮುಚ್ಚಿತ್ತ್. ಅಲ್ಲಿ ಮಲಗಿದ್ದ Mr. ರಾಜು ಅಬ್ಸ್‌ಕೇಂಡ್ ಆಗುಟ್ಟು. ಇದರ ನೋಡ್ದ ಡಾಕ್ಟರ್ ಮೂರ್ತಿಗೆ ಸಿಟ್ಟ್‌ಬಾತ್. ಕೂಡ್ಲೆ ಅವು ಇವನ ಅಡ್ರಾಸ್‌ನ ಅವನ ಕೇಸ್ ಷೀಟ್‌ಲಿ ನೋಡ್ಲೊ. ಅಷ್ಟೊತ್ತಿಗೆ ಹತ್ರಲಿ ನಿಂತಿದ್ದ ನರ್ಸ್ ಗೂಡೆ ಅವನ ಪೇಪರ್‌ಲಿ ಬಂದಿದ್ದ ಪೊಟೋನ ತಂದ್ ಕೊಟ್ಟತ್. ಕೊಡಮ್ಮ

15ನೇ ಪುಟಕ್ಕೆ

ಇದ್ದದ್ದು ಇದ್ದ ಹಾಗೆ ಹೇಳಿದರೆ ಎದ್ದುಬಂದು ಒದ್ದನಂತೆ

# ಕರ್ನಾಟಕದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆ ನಡೆದು ಬಂದ ದಾರಿ

ಪಂಚಾಯತ್‌ರಾಜ್ ವ್ಯವಸ್ಥೆಯು ಕರ್ನಾಟಕವೂ ಸೇರಿದಂತೆ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಕಂಡುಬರುವ ಒಂದು ವಿಶಿಷ್ಟ ವ್ಯವಸ್ಥೆಯಾಗಿದೆ. ವೇದಗಳ ಕಾಲದಲ್ಲಿಯೂ ಗ್ರಾಮ ಪಂಚಾಯತ್‌ಗಳು ಇದನ್ನು ಗುರುತಿಸಬಹುದಾಗಿದೆ. ಪಂಚಾಯತ್‌ಗಳು ಪ್ರಾಚೀನ ಭಾರತದ ಇತಿಹಾಸದ ಖಾಯಂ ಆಧಾರಗಳಾಗಿವೆ ಎಂದು ಕೆ. ಎಂ. ಪಣಿಕ್ಕಾರ್ ತಿಳಿಸಿದ್ದಾರೆ. ಶುಕ್ರನ ನೀತಿಸಾರ, ಮನುಸ್ಮೃತಿ ಮತ್ತು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗ್ರಾಮ ಪಂಚಾಯತ್‌ಗಳ ರಚನೆ ಮತ್ತು ಕಾರ್ಯಗಳ ಬಗ್ಗೆ ವಿವರಣೆಗಳಿವೆ. ಗ್ರೀಕ್ ರಾಯಭಾರಿ ಮೆಗಾಸ್ತನೀಸ್ ಭಾರತದ ಗ್ರಾಮಪಂಚಾಯತ್‌ಗಳ ಬಗ್ಗೆ ವರ್ಣಿಸಿದ್ದಾರೆ. ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಗ್ರಾಮ ಪಂಚಾಯತ್‌ಗಳಿಗೆ ಬಹಳವಾಗಿ ಪೆಟ್ಟು ಬಿದ್ದಿತ್ತು. ಆಡಳಿತವನ್ನು ಕೇಂದ್ರೀಕರಿಸಲಾಯಿತು. ಪಂಚಾಯತ್‌ಗಳ ಆಡಳಿತಾಧಿಕಾರ ಹಾಗೂ ಹಕ್ಕುಗಳನ್ನು ಮೊಟಕುಗೊಳಿಸಲಾಯಿತು. ನ್ಯಾಯಾಂಗ ಕಾರ್ಯಗಳನ್ನು ಅವುಗಳಿಂದ ತಪ್ಪಿಸಿ ನ್ಯಾಯಾಲಯಗಳಿಗೆ ವಹಿಸಿಕೊಡಲಾಯಿತು. ಇವುಗಳಿಂದ ಗ್ರಾಮ ಪಂಚಾಯತ್‌ಗಳು ತಮ್ಮ ಹಿಂದಿನ ಹಿರಿಮೆಯನ್ನು ಕಳೆದುಕೊಂಡು ಶಿಥಿಲವಾದವು.

ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನವೇ ಅನೇಕ ರಾಜಕೀಯ ನಾಯಕರು ಸ್ಥಳೀಯ ಸಂಸ್ಥೆಗಳನ್ನು ಅಭಿವೃದ್ಧಿ ಪಡಿಸಲು ವಿಶೇಷವಾಗಿ ಕರೆಕೊಟ್ಟರು. ಅಧಿಕಾರವನ್ನು ವಿಕೇಂದ್ರೀಕರಿಸಿ ಗ್ರಾಮ ಪಂಚಾಯತ್‌ಗಳನ್ನು ಪುನಃ ಅಧಿಕೃತವಾಗಿ ಜಾರಿಗೆ ತರಬೇಕೆಂದು ರಾಯಲ್ ಕಮಿಷನ್ 1901ರಲ್ಲಿ ಸಲಹೆ ಮಾಡಿತು. ತತ್ಪರಿಣಾಮವಾಗಿ ಸ್ವಾತಂತ್ರ್ಯಪೂರ್ವದಲ್ಲಿಯೇ ಕೆಲವಾರು ರಾಜ್ಯಗಳಲ್ಲಿ ಗ್ರಾಮಪಂಚಾಯತ್‌ಗಳನ್ನು ವಿಶಾಲ ಅಡಿಪಾಯದ ಮೇಲೆ ಪುನರ್‌ಸ್ಥಾಪಿಸುವ ವ್ಯಾಪಕ ಪ್ರಯತ್ನಗಳಾದವು.

ಭಾರತ ಸ್ವಾತಂತ್ರ್ಯವಾದ ಬಳಿಕ ನಂತರ ಗ್ರಾಮ ಪಂಚಾಯತ್‌ಗಳನ್ನು ಅಭಿವೃದ್ಧಿಗೊಳಿಸುವ ಕಾರ್ಯ ವಿಶೇಷವಾಗಿ ಆರಂಭಯವಾಯಿತು. ಈ ಕಾರ್ಯಕ್ಕೆ ಸಂವಿಧಾನದಲ್ಲಿಯೂ ಅವಕಾಶ ಮಾಡಿಕೊಡಲಾಗಿದೆ. ಸಂವಿಧಾನದಲ್ಲಿ ಅಳವಡಿಸಲಾಗಿರುವ ರಾಜ್ಯ ನಿರ್ದೇಶಕ ತತ್ವಗಳ 40ನೇ ವಿಧಿಯಲ್ಲಿ ರಾಷ್ಟ್ರವು ಗ್ರಾಮ ಪಂಚಾಯತ್‌ಗಳನ್ನು ವ್ಯವಸ್ಥೆಗೊಳಿಸಲು ತಕ್ಕ ಏರ್ಪಾಟು ಮಾಡಿ, ಅವು ಸ್ವಯಂ ಆಡಳಿತ ಶಾಖೆಗಳೋಪಾದಿಯಲ್ಲಿ ನಡೆದುಕೊಳ್ಳಲು ಅಗತ್ಯವಾದ ಅಧಿಕಾರ ಮತ್ತು ಹಕ್ಕುಗಳನ್ನು ನೀಡಬೇಕು ಎಂದು ಆದೇಶಿಸಲಾಗಿದೆ. ಅಂತೆಯೇ ವಿವಿಧ ರಾಜ್ಯಗಳು ತಮ್ಮ ತಮ್ಮ ಪರಿಸ್ಥಿತಿಗಳಿಗೆ ಅನುಗುಣವಾಗಿ ಗ್ರಾಮ ಪಂಚಾಯತ್‌ಗಳನ್ನು ಪುನರ್ ಸ್ಥಾಪಿಸಲು ಹೆಚ್ಚಿನ ಆಸಕ್ತಿ ವಹಿಸಿದವು. ನೂತನ ಪಂಚಾಯತ್ ರಾಜ್ ವ್ಯವಸ್ಥೆ ಬಲವಂತ ರಾಯ್ ಮೆಹ್ತಾ ಸಮಿತಿಯ ಶಿಫಾರಸುಗಳೊಂದಿಗೆ ಆರಂಭಗೊಂಡವು. ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ನಡೆದು ಬಂದ ಹಂತಗಳನ್ನು ಈ ಲೇಖನದಲ್ಲಿ ವಿವರಿಸಲಾಗಿದೆ.

ಪ್ರಾಚೀನ ಕರ್ನಾಟಕದಲ್ಲಿ : ಪ್ರಾಚೀನ (ಕರ್ನಾಟಕವೂ ಸೇರಿ) ಭಾರತದಲ್ಲಿ ಸರಕಾರವು ರಾಜರ ಕೈಯಲ್ಲಿ ಕೇಂದ್ರೀಕೃತವಾಗಿದ್ದರೂ ಸ್ಥಳೀಯ ಸ್ವಯಂ ಆಡಳಿತಕ್ಕೆ ಸಾಕಷ್ಟು ಅನುಕೂಲವಿತ್ತು. ಪ್ರತಿಯೊಂದು ಹಳ್ಳಿ ಮತ್ತು ಊರಿನ ಕುಟುಂಬಗಳ ಮುಖ್ಯಸ್ಥರ ಸಮಾವೇಶದಲ್ಲಿ ಎಲ್ಲಾ ಮುಖ್ಯವಾದ ಸ್ಥಳೀಯ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಚರ್ಚಿಸಲಾಗುತ್ತಿತ್ತು. ಗ್ರಾಮೀಣ ಸಂಸ್ಥೆಗಳ ಈ ಸಂಪ್ರದಾಯ ಕರ್ನಾಟಕದಲ್ಲಿ ತುಂಬಾ ಬಲಾಢ್ಯವಾಗಿತ್ತು. ಕರ್ನಾಟಕದಲ್ಲಿನ ಶಿಲಾ ಶಾಸನಗಳು ಈ ವಿಷಯದ ಬಗ್ಗೆ ಸಾಕಷ್ಟು ಮಾಹಿತಿ ಒದಗಿಸುತ್ತವೆ.

ಮೈಸೂರು ಸಂಸ್ಥಾನದಲ್ಲಿ: ಭಾರತದಲ್ಲಿ ರಾಜರ ಆಡಳಿತವಿದ್ದ ರಾಜ್ಯಗಳ ಪೈಕಿ ಮೈಸೂರು, ತಿರುವಾಂಕೂರು ಮತ್ತು ಕೊಚ್ಚಿ ರಾಜ್ಯಗಳಲ್ಲಿ ಮಾತ್ರ ಉದಾರವಾದ ಪುರಸಭಾ ಶಾಸಗಳಲ್ಲಿ ಮಾತ್ರ ಉದಾರವಾದ ಪುರಸಭಾ ಶಾಸನಗಳನ್ನು ರೂಪಿಸಿದ್ದರಿಂದ ಪೌರ ಸರಕಾರ ವ್ಯವಸ್ಥೆ ಉಚ್ಚ ಸ್ಥಿತಿಯಲ್ಲಿತ್ತು. 1850ರ ಭಾರತ ಸರಕಾರ 26ನೆಯ ಅಧಿನಿಯಮದ ಮಾದರಿಯಲ್ಲಿ 1862ರ ಹಿಂದೆಯೇ ಮೈಸೂರು ರಾಜ್ಯದಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಪೌರ ಸಮಿತಿಗಳ ಪ್ರಥಮ ಪ್ರಯೋಗ ನಡೆಯಿತು. ಈ ಪ್ರಯೋಗದ ಯಶಸ್ಸಿನಿಂದ ಉತ್ತೇಜಿತವಾಗಿ 1864 -65ರ ಹೊತ್ತಿಗೆ ಈ ರಾಜ್ಯದ ಪ್ರತಿಯೊಂದು ಜಿಲ್ಲಾ ಕೇಂದ್ರ ಸ್ಥಳಗಳಲ್ಲಿ ಪೌರ ಸಮಿತಿಗಳನ್ನು ರಚಿಸಲಾಗಿತ್ತು.

ದಿವಾನರಾದ ರಂಗಾಚಾರ್ಲು ಮತ್ತು ಶೇಷಾದ್ರಿ ಅಯ್ಯರ್ ಅವರು 1882-83ರ ಹಿಂದೆಯೂ ಸ್ಥಳೀಯ ವಿಷಯಗಳಿಗಾಗಿ ಸ್ವಯಂ ಆಡಳಿತವನ್ನು ವಿಸ್ತರಿಸುವ ಅಗತ್ಯವನ್ನು ಮನಗಂಡಿದ್ದರು. ಆ ಪ್ರಕಾರ ಮೈಸೂರು ಸ್ಥಳೀಯ ಮಂಡಳಿಗಳನ್ನು ಕ್ರಮಬದ್ಧಗೊಳಿಸುವಿಕೆ, ವಿನಿಮಯ 1902ರ ಕರಡು ಪ್ರತಿಯನ್ನು ತಯಾರಿಸಲಾಯಿತು. ಈ ನಿಯಮಗಳನ್ನು 1903ರಲ್ಲಿ ಹೊರಡಿಸಲಾಯಿತು. ಈ ನಿಯಮದ ಪ್ರಕಾರ ಒಟ್ಟು ಎಂಟು ಜಿಲ್ಲಾ ಮಂಡಳಿಗಳು, 77 ತಾಲ್ಲೂಕು ಮಂಡಳಿಗಳು ಮತ್ತು 38 ಕೂಟಗಳನ್ನು ಸ್ಥಾಪಿಸಲಾಯಿತು. ಮೈಸೂರು ನಗರದ ಅಭಿವೃದ್ಧಿಗಾಗಿ 1903ರಲ್ಲಿ ಮೈಸೂರು ನಗರಾಭಿವೃದ್ಧಿ ಮಂಡಳಿಯನ್ನು ರಚಿಸಲಾಯಿತು.

ಸ್ಥಳೀಯ ಕುಂದುಕೊರತೆಗಳನ್ನು ಸರಪಡಿಸುವುದಕ್ಕಾಗಿ 1914ರಲ್ಲಿ ಮೈಸೂರು ಸರಕಾರ ಎರಡು ಸಮಿತಿಗಳನ್ನು ರಚಿಸಿತು. 1.ಎಂ. ಕಾಂತರಾಜಾ ಅರ್ ಅಧ್ಯಕ್ಷರಾಗಿದ್ದ ಸ್ಥಳೀಯ ಸ್ವಯಂ ಅಧಿಕಾರ ಸಮಿತಿ, 2. ದಿವಾನ್ ಬಹದ್ದೂರ್ ಸಿ. ಶ್ರೀನಿವಾಸ ಅಯ್ಯಂಗಾರ್ ಅಧ್ಯಕ್ಷರಾಗಿದ್ದ ಸ್ಥಳೀಯ ಹಣಕಾಸು ಸಮಿತಿ. ಸ್ಥಳೀಯ ಮಂಡಳಿಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅವುಗಳ ರಚನೆ ಮತ್ತು ಅಧಿಕಾರಗಳನ್ನು ಉದಾರಗೊಳಿಸುವುದನ್ನು ಈ

ಸಮಿತಿಗಳು ಪರಿಶೀಲಿಸಬೇಕಾಗಿತ್ತು. ಎಲ್ಲಾ ಮಂಡಳಿಗಳು ಪರಿಶೀಲಿಸಬೇಕಾಗಿತ್ತು. ಎಲ್ಲಾ ಮಂಡಳಿಗಳಲ್ಲಿ ಆಯ್ಕೆಗೊಂಡವರು ಹೆಚ್ಚಿನ ಸಂಖ್ಯೆಯಲ್ಲಿ ಇರಬೇಕೆಂದು, ತಾಲೂಕು ಮಂಡಳಿಗಳಿಗೆ ಮುಕ್ತ ಅಧಿಕಾರ ಇರಬೇಕೆಂದು ಆ ಸಮಿತಿಗಳು ಶಿಫಾರಸು ಮಾಡಿದವು. ಈ ಎರಡು ವರದಿಗಳ ಆಧಾರದ ಮೇಲೆ 1916ರಲ್ಲಿ ಆಜ್ಞೆಗಳನ್ನು ಹೊರಡಿಸಲಾಯಿತು. 1917ರಲ್ಲಿ ಒಂದು ಹೊಸ ಮಸೂದೆ ಯನ್ನು ರಾಜ್ಯ ವಿಧಾನ ಪರಿಷತ್ತಿನಲ್ಲಿ ಮಂಡಿಸಲಾಯಿತು. 1918ರ ಸ್ಥಳೀಯ ಮಂಡಳಿಗಳ ಮತ್ತು ಗ್ರಾಮ ಪಂಚಾಯತ್ ಗಳ ಆರನೇ ಅಧಿನಿಯಮವು ಎಲ್ಲಾ ಸ್ಥಳೀಯ ಮಂಡಳಿಗಳಿಗೆ ಸಂಬಂಧಿಸಿದ ಕಾನೂನನ್ನು ಪುನರ್ ರೂಪಿಸಿತಲ್ಲದೆ, ಹೆಚ್ಚು ಅಧಿಕಾರ ಹೊಂದಿದ ಗ್ರಾಮ ಪಂಚಾಯತ್‌ಗಳ ಸ್ಥಾಪನೆಗೆ ಅವಕಾಶವಿತ್ತಿತು. ಈ ರಾಜ್ಯದಲ್ಲಿ 1923ರಲ್ಲಿ ಎರಡನೆಯ ಸ್ವಯಂ ಆಡಳಿತ ಸಂಸ್ಥೆಗಳ ಸಮ್ಮೇಳನವನ್ನು ನಡೆಸಲಾಯಿತು. (ಪ್ರಥಮ ಸಮ್ಮೇಳನ 1915ರಲ್ಲಿ ಸೇರಿತ್ತು) ಅದು ಮಾಡಿದ ಕೆಲವು ಮುಖ್ಯ ಶಿಫಾರಸ್ಸುಗಳನ್ನು ಸರಕಾರ ಅಂಗೀಕರಿಸಿತು. ಇದಕ್ಕೆ ಅನುಸಾರವಾಗಿ 1927ರಲ್ಲಿ ತಾಲೂಕು ಮಂಡಳಿಗಳನ್ನು ರದ್ದುಗೊಳಿಸಾಲಾಯಿತು.

ಕಾಳೇಸಮಿತಿ-1939: ಕಾಳೇ ಸ್ವಯಂ ಆಡಳಿತ ಸಮಿತಿಯನ್ನು 1939ರಲ್ಲಿ ನೇಮಿಸಲಾಯಿತು. ಸರಕಾರ ಮತ್ತು ಸ್ಥಳೀಯ ಸಂಸ್ಥೆಗಳ ನಡುವಣ ಆರ್ಥಿಕ ಸಂಬಂಧ, ಅವುಗಳ ಆಡಳಿತ ಮಟ್ಟ ಹಾಗೂ ಕಾರ್ಯಕ್ಷೇತ್ರ ವಿಸ್ತರಿಸುವ ಅವಶ್ಯಕತೆಯನ್ನು ಈ ಸಮಿತಿ ಪರಿಶೀಲಿಸಬೇಕಿತ್ತು. ಆದರೆ ಶಿಫಾರಸುಗಳನ್ನು ಬಹುಪಾಲು ಜಾರಿಗೊಳಸಿಲಾಯಿತು.

ಪಂಚಾಯತ್‌ಗಳ ರಚನೆ: 1919ರಲ್ಲಿ ಪ್ರತಿಯೊಂದು ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಗ್ರಾಮ ಪಂಚಾಯತ್ ಅನ್ನು ಸ್ಥಾಪಿಸಲಾಯಿತು. ಪ್ರತಿಯೊಂದು ಪಂಚಾಯತ್ ಪ್ರತ್ಯೇಕ ಸಂಪನ್ಮೂಲಗಳಿದ್ದು ಅವುಗಳ ಪ್ರಗತಿ ಸಮಾಧಾನಕರವಾಗಿದ್ದರೆ, ಚುನಾವಣೆಯ ಹಕ್ಕನ್ನು ಕೊಡಲಾಗುತ್ತಿತ್ತು. ಪಂಚಾತ್ ಹತೋಟಿ, ಪರಿಶೀಲನೆ ಮತ್ತು ಮೇಲ್ವಿಚಾರಣೆ ಮತ್ತು ಅಧಿಕಾರವನ್ನು ಅಮಲ್ದಾರರವರಿಗೆ ನೀಡಲಾಯಿತು. ನೈರ್ಮಲೀಕರಣ, ಸಂಪರ್ಕ ವ್ಯವಸ್ಥೆ, ವೈದ್ಯಕೀಯ ಪರಿಹಾರ ಮತ್ತಿತರ ಎಲ್ಲಾ ಸೌಲಭ್ಯಗಳನ್ನು ನೀಡಲು ಜಿಲ್ಲಾ ಮಂಡಳಿಗಳಿಗೆ ಸಂಪೂರ್ಣ ಸಾಮ್ಯದೊರಕಿತು.

ಮೈಸೂರು ಪುರಸಭೆಗಳ ಅಧಿನಿಯಮ 1952: ಭಾರತ ಸ್ವಾತಂತ್ರ್ಯ ಪಡೆದ ನಂತರ ರಾಜ್ಯದಲ್ಲಿನ ಸ್ಥಳೀಯ ಸಂಸ್ಥೆಗಳನ್ನು ಹೆಚ್ಚು ಸ್ವತಂತ್ರವಾಗಿರುವಂತೆ ಹಾಗೂ ಪರಿಣಾಮಕಾರಿ ಗೊಳಿಸುವುದರತ್ತ ಗಮನ ಕೊಡಲಾಯಿತು. 1948ರ ಗ್ರಾಮೀಣಾಭಿವೃದ್ಧಿಯ ಯೋಜನೆಯಿಂದಾಗಿ, ಸರಕಾರದ ಅಧಿಕಾರಗಳ ವಿಕೇಂದ್ರೀಕರಣವಾಗಿ ಅವುಗಳನ್ನು ಅಧಿಕಾರಗಳಿಲ್ಲದ ಸಂಸ್ಥೆಗಳಿಗೆ ವಹಿಸಲಾಯಿತು.

ವೆಂಕಟಪ್ಪ ಸಮಿತಿ 1949: ಸ್ಥಳೀಯ ಸಂಸ್ಥೆಗಳ ಸಮಸ್ಯೆಗಳನ್ನು ಪರಿಶೀಲಿಸುವುದುಕ್ಕಾಗಿ 1949ರಲ್ಲಿ ವಿ. ವೆಂಕಟಪ್ಪ ಅವರ ಅಧ್ಯಕ್ಷತೆಯಲ್ಲಿ ಸ್ಥಳೀಯ ಸಂಸ್ಥೆಗಳ ಸಮನ್ವಯ ಸಮಿತಿಯನ್ನು ರಚಿಸಲಾಯಿತು. ಆ ಸಮಿತಿ 1950, ಜೂನ್ 12ರಂದು ತನ್ನವರದಿಯನ್ನು ಸಲ್ಲಿಸಿತು. ಆದರೆ ಶಿಫಾರಸುಗಳನ್ನು 1952 ರ ಮೈಸೂರು ಗ್ರಾಮ ಪಂಚಾಯತ್‌ಗಳು ಮತ್ತು ಜಿಲ್ಲಾ ಮಂಡಳಿಗಳ ಅಧಿನಿಯಮದಲ್ಲಿ ಅಳವಡಿಸಲಾಯಿತು. ತತ್ಪರಿಣಾಮವಾಗಿ ಎರಡು ಹಂತದ ಸ್ಥಳೀಯ ಸ್ವಯಂ ಆಡಳಿತ ವ್ಯವಸ್ಥೆ ರೂಪುಗೊಂಡಿತು. ಆದರೆ ಚುನಾವಣೆಗಳನ್ನು ನಡೆಸಲು ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಜಿಲ್ಲಾ ಮಂಡಳಿಗಳ ಕೆಲಸ ಸ್ಥಗಿತಗೊಂಡಿತು.

ಚಂದ್ರಶೇಖರಯ್ಯ ಸಮಿತಿ1953 : 1953ರಲ್ಲಿ ಸರಕಾರ ಡಿ. ಎಚ್. ಚಂದ್ರಶೇಖರಯ್ಯ ಅವರ ಅಧ್ಯಕ್ಷತೆಯಲ್ಲಿ ವಿಚಾರಣಾ ಸಮಿತಿಯನ್ನು ನೇಮಿಸಿತು. ಆ ಸಮಿತಿ 1954ರಲ್ಲಿ ತನ್ನ ವರದಿಯನ್ನು ಸಲ್ಲಿಸಿ ಹೀಗೆ ಶಿಫಾರಸು ಮಾಡಿತು. 1. ಜಿಲ್ಲೆಯೊಳಗಿನ ತಾಲೂಕು ಮಂಡಳಿಗಳ ಸದಸ್ಯರುಗಳುಳ್ಳ ಜಿಲ್ಲಾ ಮಂಡಳಿಗಳನ್ನು ಮುಂದುವರಿಸುವುದು. 2. ತಾಲೂಕು ಮಂಡಳಿಗಳನ್ನು ಪುನರಾರಂಭಿಸುವುದು 3. ತಾಲೂಕು ಮಂಡಳಿಯ ಸದಸ್ಯತ್ವದ ಮೂರನೇ ಒಂದು ಭಾಗವನ್ನು ಗ್ರಾಮ ಪಂಚಾಯತ್ ಮತ್ತು ಪುರಸಭಾ ಮಂಡಳಿಗಳ ಪ್ರತಿನಿಧಿಗಳಿಗಾಗಿ ಕಾಯ್ದಿರಿಸುವುದು ಹಾಗೂ ಉಳಿದ ಎರಡನೇ ಮೂರು ಭಾಗವನ್ನು ತಾಲೂಕಿನಲ್ಲಿ ನೇರ ಚುನಾವಣೆಯ ಮೂಲಕ ಭರ್ತಿ ಮಾಡುವುದು. 4. ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರುವುದು.

ಏಕೀಕರಣದ ನಂತರ: ದೇಶದ ಇತರೆಡೆಗಳಂತೆ ಕರ್ನಾಟಕದಲ್ಲೂ 1957ರ ಬಲವಂತರಾಯ್ ಮೆಹ್ತಾ ಸಮಿತಿಯ ವರದಿಯ ಅನ್ವಯ ಪಂಚಾಯತ್‌ರಾಜ್ ಪದ್ಧತಿಯನ್ನು ಜಾರಿಗೊಳಿಸಲಾಯಿತು. 1958ರಲ್ಲಿ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು ಬಲವಂತರಾಯ್ ಮೆಹ್ತಾ ಸಮಿತಿಯ ಶಿಫಾರಸುಗಳನ್ನು ಅನುಮೋದಿಸಿತು. ಪಂಚಾಯತ್ ರಾಜ್ ವ್ಯವಸ್ಥೆಯನ್ನು ಏರ್ಪಾಡು ಮಾಡುವ ಅಧಿಕಾರವನ್ನು ರಾಜ್ಯ ಸರಕಾರಗಳಿಗೆ ಕೊಡಲಾಯಿತು. ಈ ಹಿನ್ನೆಯಲ್ಲಿ ಕರ್ನಾಟಕ ರಾಜ್ಯ ಕರ್ನಾಟಕ ಗ್ರಾಮ ಪಂಚಾಯತ್‌ಗಳು ಮತ್ತು ಸ್ಥಳೀಯ ಮಂಡಳಿಗಳ ಕಾಯ್ದೆ 1959 ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ರೂಪಿಸಿತು. ಅವು. 1. ಗ್ರಾಮ ಪಂಚಾಯತ್‌ಗಳು. 2. ತಾಲೂಕು ಅಭಿವೃದ್ಧಿ ಮಂಡಳಿಗಳು, 3. ಜಿಲ್ಲಾ ಅಭಿವೃದ್ಧಿ ಮಂಡಳಿಗಳು.

ಜನರ ಈ ಸಂಸ್ಥೆಗಳಿಗೆ ಅಧಿಕಾರ ಮತ್ತು ಜವಾಬ್ದಾರಿಯನ್ನು ವರ್ಗಾಯಿಸಿ ಯೋಜಿತ ಕಾರ್ಯಕ್ರಮದಲ್ಲಿ ರೂಪಿಸಲ್ಪಟ್ಟ ಗುರಿಗಳನ್ನು ಈಡೇರಿಸುವುದು ಈ ಹಂತಗಳ ಕಾರ್ಯವಾಯಿತು. ಅನಂತರ 1959ರ ಅಧಿನಿಯಮವನ್ನು 1961ರ 26ನೆಯ, 1964ರ 22ನೆಯ, 1965ರ ಐದನೆಯ, 1970ರ ನಾಲ್ಕನೆಯ ಹಾಗೂ 1974ರ 21ನೆಯ ಅಧಿನಿಯಮಗಳ ಮೂಲಕ ತಿದ್ದುಪಡಿ ಮಾಡಲಾಯಿತು.

**ಊರಿಗೆ ಬಂದವಳು ನೀರಿಗೆ ಬಾರದೆ ಹೋದಾಳೇ.**

1983ರ ಪಂಚಾಯತ್‌ರಾಜ್ ಕಾಯಿದೆ: ಅಧಿಕಾರದ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ಯೋಜನೆಗಳನ್ನು ಅನುಷ್ಠಾನಕ್ಕೆ ತರುವ ಜವಾಬ್ದಾರಿಯನ್ನು ಹೊತ್ತಿರುವ ಪಂಚಾಯತ್‌ರಾಜ್ ಸಂಸ್ಥೆಯು ತುಂಬಾ ಉಪಯುಕ್ತವಾದದ್ದು. ಅಶೋಕ್ ಮೆಹ್ತಾ ಸಮಿತಿಯ ಶಿಫಾರಸುಗಳನ್ನು ಆಧರಿಸಿದ ಮತ್ತು ಅಧಿಕಾರದ ವಿಕೇಂದ್ರೀಕರಣದ ಮೂಲಕ ಮಹಾತ್ಮಾ ಗಾಂಧೀಜಿಯವರ ಕಲ್ಪನೆಯ ಸಮಾಜವಾದವನ್ನು ಜಾರಿಗೊಳಿಸಲು 1983ರಲ್ಲಿ ಕರ್ನಾಟಕದಲ್ಲಿ ರಾಮಕೃಷ್ಣ ಹೆಗಡೆಯವರ ಜನತಾ ಸರಕಾರ ಹಾಗೂ ಪಂಚಾಯತ್‌ರಾಜ್ ಮತ್ತು ಗ್ರಾಮಾಭಿವೃದ್ಧಿಯ ಸಚಿವರಾಗಿದ್ದ ನಜೀರ್‌ಸಾಬ್ ಅವರ ದಿಟ್ಟ ನಿಲುವಿನಿಂದಾಗಿ ಕರ್ನಾಟಕದಲ್ಲಿ ಹೊಸ ಪಂಚಾಯತ್‌ರಾಜ್ ವ್ಯವಸ್ಥೆ, ಕರ್ನಾಟಕ ಜಿಲ್ಲಾ ಪರಿಷತ್, ತಾಲೂಕು ಪಂಚಾಯತ್ ಸಮಿತಿ, ಮಂಡಲ ಪಂಚಾಯತ್ ಮತ್ತು ನ್ಯಾಯ ಪಂಚಾಯತ್‌ನ ಅಧಿನಿಯಮ 1983 ಜಾರಿಗೆ ಬಂದು ಮೊದಲಿದ್ದ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯ ಬದಲಾಗಿ ಎರಡು ಹಂತದ 1. ಮಂಡಲ ಪಂಚಾಯತ್, 2. ಜಿಲ್ಲಾ ಪರಿಷತ್ ಪಂಚಾಯತ್ ರಾಜ್ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು.

1993ರ ಹೊಸ ಪಂಚಾಯತ್‌ರಾಜ್ ಕಾಯ್ದೆ: 1983ರ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮವು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ದುರ್ಬಲ ವರ್ಗ ಮತ್ತು ಮಹಿಳೆಯರ ಮೀಸಲಾತಿಯ ಬಗ್ಗೆ ದಿಟ್ಟ ನಿಲುವನ್ನು ತೆಗೆದುಕೊಂಡು ಪರಿಶಿಷ್ಟ ಜಾತಿಗೆ ಶೇ. 15ರಷ್ಟು, ಪರಿಶಿಷ್ಟ ಪಂಗಡಕ್ಕೆ ಶೇ. ಮೂರರಷ್ಟು ಮತ್ತು ಮಹಿಳೆಯರಿಗೆ ಶೇ. 25ರಷ್ಟು ಮೀಸಲಾತಿಯನ್ನು ರಾಷ್ಟ್ರದಲ್ಲೇ ಪ್ರಥಮಬಾರಿಗೆ ಮಂಡಲ್ ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್‌ಗಳಲ್ಲಿ ಕಲ್ಪಿಸಿ, ಜೊತೆಗೆ ಪರಿಶಿಷ್ಟರು ಮತ್ತು ಹಿಂದುಳಿದ ವರಿಗೆ ನೀರಾವರಿ, ಕೈಗಾರಿಕೆ, ಪಶುಪಾಲನೆ ಇತ್ಯಾದಿ ಅಗತ್ಯದ ಕೆಲಸ ಕಾರ್ಯಗಳನ್ನು ರೂಪಿಸಿತು. ಕರ್ನಾಟಕದ ಈ ದಿಟ್ಟ ಪ್ರಯೋಗ ಹಾಗೂ ಅದರ ಫಲಿತಾಂಶ ಕೇಂದ್ರ ಸರಕಾರದ ಗಮನವನ್ನು ಸೆಳೆಯಿತು. 1993ರ ಏಪ್ರಿಲ್‌ನಲ್ಲಿ ಕೇಂದ್ರ ಸರಕಾರ ಸಂವಿಧಾನದ 73ನೇ ತಿದ್ದುಪಡಿಯನ್ನು ತರುವುದರ ಮೂಲಕ ಪಂಚಾಯತ್‌ರಾಜ್ ವ್ಯವಸ್ಥೆ ದೇಶದಾದ್ಯಂತ ಒಂದು ಖಾಯಂ ವ್ಯವಸ್ಥೆಯಾಗಿ ರೂಪುಗೊಂಡಿರುವುದಕ್ಕೆ ಅವಕಾಶ ಮಾಡಿಕೊಟ್ಟಿದೆ. ಈ ತಿದ್ದುಪಡಿಯಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಒಂದು ಪ್ರಮುಖ ಅಂಶವಾಗಿ ಸೇರಿಸಲಾಗಿದೆ. ಇದನ್ನು ಪ್ರಥಮ ಬಾರಿಗೆ ಕಾರ್ಯ ರೂಪಕ್ಕೆ ತಂದ ಕೀರ್ತಿ ಕರ್ನಾಟಕಕ್ಕೆ ಸೇರುತ್ತದೆ. ಈ ಮೊದಲಿದ್ದ ಜನತಾದಳದ ಸರಕಾರ ಜಿಲ್ಲಾ ಪಂಚಾಯತ್ ಮತ್ತು ತಾಲೂಕು ಪಂಚಾಯತ್‌ಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಅಧಿಕಾರಾವಧಿಯನ್ನು 20 ತಿಂಗಳಿಗೆ ನಿಗದಿಪಡಿಸಿದ್ದು, ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಗೆ ಬದಲಾಗಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ರೂಪಿಸಲು ನಿರ್ಧರಿಸಿತ್ತು. ಆ ಹೊತ್ತಿಗೆ ಆ ಸರಕಾರ ಚುನಾವಣೆಗಳಲ್ಲಿ ಸೋಲನ್ನು ಅನುಭವಿಸಿ ನಂತರ ಅಸ್ತಿತ್ವಕ್ಕೆ ಬಂದಿರುವ ಕಾಂಗ್ರೆಸ್ ಸರಕಾರ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನೇ ಮುಂದುವರಿಸಿದೆ.

## ಮನುಷ್ಯನನ್ನು ಹೋಲುವ ಪ್ರಾಣಿಗಳಾವುವು?

ಅನೇಕ ಅಂಶಗಳಲ್ಲಿ ಮನುಷ್ಯನನ್ನು ಹೋಲುವ ಪ್ರಾಣಿಗಳಲ್ಲಿ ಗೋರಿಲ್ಲ (Gorilla), ಚಿಂಪ್ಯಾನ್ಸಿ(Chimpanzee) ಮತ್ತು ಒರಾಂಗೊಟಾಂಗ್(Orang-utan)- ಇವು ಕೆಲವು. ಇವು ಒಂದು ಬಗೆಯ ಬಾಲವಿಲ್ಲದ ಕಪಿಗಳು. ಇವು 'ನರವಾನರ' ( Anthropoid) ವರ್ಗಕ್ಕೆ ಸೇರಿವೆ. ಇವು ಆಫ್ರಿಕಾ ಮತ್ತು ಏಷ್ಯಾದ ದಟ್ಟ ಅರಣ್ಯಗಳಲ್ಲಿ ವಾಸಿಸುತ್ತವೆ.

ಈ ಪ್ರಾಣಿಗಳಲ್ಲಿ ಚಿಂಪ್ಯಾನ್ಸಿ ಮನುಷ್ಯನನ್ನು ಹೆಚ್ಚಾಗಿ ಹೋಲುತ್ತದೆ. ಈ ಎಲ್ಲ ಪ್ರಾಣಿಗಳ ಎಲುಬು ರಚನೆ, ಮನುಷ್ಯನ ಎಲುಬನ್ನೇ ಹೋಲುತ್ತದೆ. ಅವುಗಳ ಹಲ್ಲುಗಳ ಸಂಖ್ಯೆ ನಮ್ಮಷ್ಟೇ ಇರುತ್ತದೆ. ಅವುಗಳ ರಚನೆ ಸಹ ನಮ್ಮದರಂತೆಯೇ ಇರುತ್ತದೆ. ಮನುಷ್ಯರಂತೆ ಅವುಗಳ ಹಣೆಯ ಮೇಲೂ ನಿರಿಗೆಗಳಿರುತ್ತವೆ. ಅವುಗಳ ತಲೆಬುರುಡೆ ಮತ್ತು ರಕ್ತ ಕೂಡಾ ಮನುಷ್ಯನಿಗಿರುವಂತೆ ಇರುತ್ತದೆ. ಇಷ್ಟಾದರೂ, ಅವು ನಮ್ಮಂತೆ ಮಾತನಾಡಲಾರವು.

ಗೋರಿಲ್ಲ, ಮನುಷ್ಯನಷ್ಟೇ ಎತ್ತರವಾಗಿರುತ್ತದೆ. ಆದರೆ ಅದರ ತೂಕ ಮತ್ತು ಶಕ್ತಿ, ಮನುಷ್ಯನಿಗಿಂತ ಹೆಚ್ಚು. ಗೋರಿಲ್ಲಗಳು ಗುಂಪು-ಗುಂಪಾಗಿ ವಾಸಿಸುತ್ತವೆ. ಒಂದೊಂದು ಗುಂಪಿನಲ್ಲೂ 20-30 ಗೋರಿಲ್ಲಗಳಿರುತ್ತವೆ. ಮರಿಗಳು, ದೊಡ್ಡದಾಗುವವರೆಗೆ ತಮ್ಮ ತಂದೆ- ತಾಯಿಯ ಬಳಿಯೇ ಇರುತ್ತವೆ. ಗೋರಿಲ್ಲದ ಮರಿಗಳು ಮರದ ಮೇಲೆ ಮಲಗಿ ನಿದ್ರಿಸುತ್ತವೆ. ದೊಡ್ಡ ಗೋರಿಲ್ಲಗಳು ನೆಲದ ಮೇಲೆ ಮಲಗುತ್ತವೆ. ಸಾಮಾನ್ಯವಾಗಿ ಅವು ಶಾಂತವಾಗಿರುತ್ತವೆ. ಯಾರಾದರೂ ಅವನ್ನು ರೇಗಿಸಿದರೆ, ಅಥವಾ ಗಾಯಗೊಳಿಸಿದರೆ ಅವು ತಮ್ಮ ಎದೆಯಮೇಲೆ ಹೊಡೆದುಕೊಳ್ಳಲಾರಂಭಿಸುತ್ತವೆ. ಅವು ತಮ್ಮ ಬಾಯಿಂದ ಜೋರಾಗಿ ಶಬ್ದ ಮಾಡುತ್ತವೆ. ಅವುಗಳ ಬಣ್ಣ ಕಪ್ಪು. ಈಗ ಇವುಗಳ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತಿದೆ. ಅವು ನಿರ್ನಾಮವಾಗುವುದನ್ನು ತಡೆಯಲು ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಚಿಕ್ಕಂದಿನಲ್ಲಿ ಈ ಪ್ರಾಣಿಗಳು, ಹುಳು ಹುಪ್ಪಟೆಗಳು, ಪಕ್ಷಿಗಳ ಮೊಟ್ಟೆಗಳು, ಮರದ ಎಲೆಗಳು ಹಾಗೂ ಮೊಗ್ಗುಗಳನ್ನು ತಿನ್ನುತ್ತವೆ. ಅನಂತರ, ಅವು ಸಸ್ಯಾಹಾರಿಗಳಾಗುತ್ತವೆ.

ಈ ಪ್ರಾಣಿಗಳಲ್ಲಿ ಚಿಂಪಾನ್ಸಿಗೆ ತುಂಬ ಹೆಚ್ಚಿನ ಬುದ್ಧಿ ಇದೆ. ಇದು ಮನುಷ್ಯನ ಅನೇಕ ಅಭ್ಯಾಸಗಳನ್ನು ಅನುಕರಿಸಬಲ್ಲುದು. ಅದರ ಮೈತುಂಬ ಕಪ್ಪು ಕೂದಲಿರುತ್ತದೆ. ಅದನ್ನು ಸುಲಭವಾಗಿ ಹಿಡಿಯಬಹುದು. ಈ ಪ್ರಾಣಿಗಳನ್ನು ನೀವು ಮೃಗಾಲಯಗಳಲ್ಲಿ ನೋಡಿರಬಹುದು. ಇವೆಲ್ಲ ವಿಚಿತ್ರ ಶಬ್ದ ಮಾಡುತ್ತವೆ.

## ಸಂಗಾತಿ ರಾಶಿ ಫಲ : ಏಪ್ರಿಲ್ 8-2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

**ಮೇಷರಾಶಿ** : ಸ್ವಂತ ಬಂಧುಗಳ ಆಗಮನದಿಂದ ಮನಸ್ಸಿಗೆ ನೆಮ್ಮದಿ. ಮನಸ್ಸಿನ ವ್ಯಾಕುಲತೆಯನ್ನು ದೂರ ಮಾಡಿ. ಅನಾವಶ್ಯಕವಾಗಿ ಸಂಚಾರ ಬೇಡ. ಮನಸ್ಸು ಅಲ್ಲೋಲ ಕಲ್ಲೋಲವಾಗುವುದು. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕಿ ಮುಂದಕ್ಕೆ ಹೋಗಿ.

**ವೃಷಭರಾಶಿ** : ದೇಹದಲ್ಲಿ ಉಷ್ಣ ಸಂಬಂಧ ರೋಗಗಳು ಕಾಣಿಸಬಹುದು. ಮಾನಸಿಕ ವ್ಯಥೆಯು ಉಲ್ಬಣವಾದಿತು. ಹಣಕಾಸಿನ ವ್ಯವಹಾರದಲ್ಲಿ ದಕ್ಕೆ ಬರಲಾರದು. ಸರಕಾರೇತರ ವ್ಯವಹಾರಗಳಲ್ಲಿ ಲಾಭವಾದೀತು ದೇವತಾರಾಧನೆ ಮಾಡಿಕೊಂಡು ಬನ್ನಿ.

**ಮಿಥುನರಾಶಿ** : ಹಣಕಾಸಿನ ವ್ಯವಹಾರದಲ್ಲಿ ಹೇರಳ ಲಾಭವಾದಿತು. ದೇಹದಲ್ಲಿ ಆರೋಗ್ಯ ಸುಧಾರಿಸಬಹುದು. ಭೂ ವ್ಯವಹಾರದಲ್ಲಿ ಲಾಭವಾದೀತು. ವಿಷ್ಣು ಆರಾಧನೆ ಮಾಡಿಕೊಂಡು ಬನ್ನಿ.

**ಕರ್ಕಾಟಕ ರಾಶಿ** : ಸಂಸಾರದಲ್ಲಿ ಕಷ್ಟ ನಿಷ್ಠುರಗಳು ಬರಲಿದೆ ಅಪವಾದ ಬರುವ ಸಂಭವವಿದೆ. ಸರ್ಕಾರದಿಂದ ಉಪಕಾರವಾದಿತು. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕದಿದ್ದರೆ ವ್ಯವಹಾರದಲ್ಲಿ ನಷ್ಟ ಸಂಭವಿಸಬಹುದು ಗುರು ಜಪ ಮಾಡಿ

**ಸಿಂಹರಾಶಿ** : ಸ್ವಂತದವರಿಂದಲೇ ಅಪಪ್ರಚಾರವಾದೀತು. ರೋಗವು ನಿಮ್ಮನ್ನು ಸುತ್ತುವರಿಯಬಹುದು. ಸ್ಥಾನಪಲ್ಲಟನೆಯಾಗಬಹುದು. ಉಷ್ಣ ಸಂಬಂಧ ರೋಗಗಳು ಬರಬಹುದು. ಚಿಕಿತ್ಸೆ ಮಾಡಿಸಬೇಕಾಗಿರುವುದು.

**ಕನ್ಯಾರಾಶಿ** : ಸ್ವಜನರಿಂದ ಬೇರ್ಪಡುತ್ತೀರಿ, ಜೋಕೆ? ಆಸ್ತಿ ಸಂಬಂಧಕವಾಗಿ ವ್ಯಾಜ್ಯ ಬರಬಹುದು. ಆರೋಗ್ಯವೂ ಹದಗೆಡುವುದು. ಗುಪ್ತಚಿಂತೆಯನ್ನು ದೂರಮಾಡಿ. ವಿಷ್ಣುವಿನ ಆರಾಧನೆ ಮಾಡಿಕೊಂಡು ಬನ್ನಿ.

**ತುಲಾರಾಶಿ** : ಸಂಸಾರದಲ್ಲಿ ಏರು ಪೇರಾಗುವುದು. ತೀರ್ಥಯಾತ್ರೆಗೆ ಶುಭಯೋಗವಿದೆ. ವ್ಯಾಪರಸ್ತರಿಗೆ ಸ್ವಲ್ಪ ಮಟ್ಟಿಗೆ ಒಳ್ಳೆಯದಿದೆ. ಆದರೆ ಕಿರಿಕಿರಿ ತಪ್ಪಿದ್ದಲ್ಲ. ವಿಶ್ವಾಸದಿಂದ ಮೋಸ, ವಂಚನೆಗೆ ಒಳಾಗಾಗುತ್ತೀರಿ ಸೂಕ್ಷ್ಮರೀತಿಯಿಂದ ಮುನ್ನಡೆಯಿರಿ.

**ವೃಶ್ಚಿಕರಾಶಿ** : ದೇವತಾಕಾರ್ಯಕ್ಕೆ ಸುಸಂದರ್ಭವಿದೆ. ಕೆಲವೊಮ್ಮೆ ಸಂಸಾರದಲ್ಲಿ ಅಡ್ಡಿ ಆತಂಕಗಳು ಬರಬಹುದು. ಅತಿಯಾದ ಖರ್ಚು ವೆಚ್ಚಗಳು, ಬಂದೋಗುವುದು. ಸಂತ್ರಸ್ಥರಾದ ಸದಸ್ಯೆಯರಿಗೆ ಆರೋಗ್ಯ ಕೆಡಬಹುದು. ಸುಬ್ರಮಣ್ಯನ ಆರಾಧನೆ ಮಾಡಿಕೊಂಡು ಬನ್ನಿ.

**ಧನಸ್ಸುರಾಶಿ** : ಬಂದುಗಳೊಂದಿಗೆ ಕ್ಲೇಶಗಳು ಬರಬಹುದು. ಮಿತ್ರರೇ ಶತ್ರುಗಳಾಗುವರು ಶತ್ರುಗಳ ದೃಷ್ಟಿ ನಿಮ್ಮ ಮೇಲಿದೆ ಎಚ್ಚರದಿಂದ ಮುನ್ನಡೆಯಿರಿ. ವಿಧ್ಯಾವಂತರಿಗೆ ಉದ್ಯೋಗ ದೊರಕುವ ಸಂಭವವಿದೆ. ಗುರು ಜಪ ಮಾಡಿಕೊಂಡು ಬನ್ನಿ.

**ಮಕರರಾಶಿ** : ಗೃಹವಲಯದಲ್ಲಿ ನೆಮ್ಮದಿ ಅದಿತು ಸ್ಥಾನದಲ್ಲಿ ಸ್ಥಿರತೆ ಹಣಕಾಸಿನ ವ್ಯವಹಾರದಲ್ಲಿ ತಾಪತ್ರ ಬರಲಾರದು ಕುಟುಂಬದಲ್ಲಿ ಅಭಿವೃದ್ಧಿ ಕಾಣಬಹುದು. ಗಣಪತಿಯನ್ನು ಆರಾಧನೆ ಮಾಡಿಕೊಂಡು ಬನ್ನಿ. ನೆಮ್ಮದಿ ದೊರೆಯುತ್ತದೆ.

**ಕುಂಬರಾಶಿ** : ಶನಿರಾಹು ಕೇತುಗಳು ಅನೇಕ ರೀತಿಯಲ್ಲಿ ಕಷ್ಟಗಳನ್ನು ಕೊಡುವರು. ದೇಹದಲ್ಲಿ ಆರೋಗ್ಯವೂ ಕ್ಷೀಣಿಸುವುದು ಮನಸ್ಸಿಗೆ ನೆಮ್ಮದಿ ಇರಲಾರದು ಗಣಹೋಮ ಸತ್ಯನಾರಾಯಣ ಸ್ವಾಮಿ ಪೂಜೆ ಮಾಡಿಕೊಂಡು ಬನ್ನಿ.

**ಮೀನರಾಶಿ** : ಅನಾವಶ್ಯಕವಾಗಿ ಸಂಚಾರ ಮಾಡಬೇಡಿ. ನಿಮ್ಮ ಹಿಂದೆಯೇ ಶತೃಗಳು ತಿರುಗುತ್ತಿರುತ್ತಾರೆ. ವ್ಯವಹಾರದಲ್ಲಿ ನೋವು ಉಂಟಾದಿತು. ಕೆಟ್ಟವರಿಂದಲೇ ಉಪಕಾರವಾದಿತು. ನವಗ್ರಹರಾಧನೆ ಮಾಡಿಕೊಂಡು ಬನ್ನಿ

---

**11ನೇ ಪುಟದಿಂದ**

ಇಲ್ಲಿ ಈಗ ಹ್ಯಾಗೆ ತಪ್ಪಿಸಿಕೊಳ್ಳುತ್ತಾನೆ ಈ ಕದೀಮ. ಒಂದು ಕಂಪ್ಲೇಂಟನ್ನು ಇಲ್ಲೇ ಜಯಲಕ್ಷ್ಮಿಪುರಂ ಪೋಲಿಸ್ ಸ್ಟೇಶನ್ನಿ ಈ ಕೂಡ್ಲೆ ಬರ್ದುಕೊಟ್ಟುಬಿಡಿತ್ತೇಳ್ಳೊ.

ಜಯಲಕ್ಷ್ಮಿ ಪೋಲಿಸ್ ಸ್ಟೇಶನ್‌ಲಿ ಕಂಪ್ಲೇಂಟ್ ಬುಕ್ಕ್ ಆಕನ ಇವನ ಪೊಟೋ ಕಾಫಿಗ ಆ ಗೂಡ್ಲೆ ಬೇಕಾದಷ್ಟ್ ಪ್ರಿಂಟ್ ಆಗಿ ಎಲ್ಲಾಕಡೆಯ ಪೋಲಿಸ್ ಸ್ಟೇಶನ್‌ಗಳಿಗೆ ಕಳ್ಸಿಕೊಟ್ಟ್ ಆತ್.

(ಮುಂದ್‌ವರ್ದದೆ)

### ನಗೆಹನಿಗಳು

ಟೀಚರ್: ಗುಂಡು, ಹಾಲು ಕೆಡದಿರಲು ಏನು ಮಾಡಬೇಕು?
ಗುಂಡು ಹಸುವಿನ ಕೆಚ್ಚಲಲ್ಲೇ ಬಿಡಬೇಕು.

* * *

ಮೇಸ್ಟ್ರು : ರಾಮು ನೆನ್ನೆ ಶಾಲೆಗೆ ಏಕೆ ಬರಲಿಲ್ಲ?
ರಾಮು : ಸಾರ್ ಮೊನ್ನೆ ರಾತ್ರಿ ನಿಮ್ಮನ್ನ ಡಾಕ್ಟರ್ ಶಾಪ್ ನಲ್ಲಿ ನೋಡಿದ್ನಲ್ಲಿ ಮಾರನೆಯ ದಿನ ನಿಮಗೆ ಹುಷಾರಿರೊಲ್ಲ ಅಂತ ಬರಲಿಲ್ಲ.

---

ತಾಯಿಗಿಂತ ಬಂಧು ಇಲ್ಲ, ಉಪ್ಪಿಗಿಂತ ರುಚಿ ಇಲ್ಲ.




✦ ಕೌಂಡಿನ್ಯ : ಧಾರವಾಹಿ -28

ರಾತ್ರಿ ಹನ್ನೊಂದುವರೆಯ ಸಮಯ!

ಮಹಡಿಯ ಮೇಲಿನ ರೂಮೊಂದರ ಹತ್ತಿರ ಪ್ರಸನ್ನ ಮತ್ತು ರೇವತಿ ಕುಳಿತುಕೊಂಡಿದ್ದಾರೆ!

ಅವರಿಬ್ಬರು ಗಾಬರಿಯಾಗಿದ್ದಾರೆ.

ಪ್ರಸನ್ನನನ್ನು ಮುಸುಕ ಧರಿಸಿದ್ದ ವ್ಯಕ್ತಿಯೊಬ್ಬ ಸಾಯಿಸಲು ಪ್ರಯತ್ನಿಸಿದ್ದನು. ರೇವತಿ ಇದನ್ನು ಕಂಡು ಕೂಗಿಕೊಂಡಿದ್ದರಿಂದ ಹಂತಕ ಓಡಿ ಹೋಗಿದ್ದನು.

ನೆಲದ ಮೇಲೆ ಚಪ್ಪಲಿ ಬಿದ್ದಿತು!

ಪ್ರಸನ್ನ ಅದನ್ನು ಎತ್ತಿಕೊಂಡು ನೋಡಿದನು. ಅದು....ಅದು ಅವನ ಅಣ್ಣ ಲಿಂಗಯ್ಯನ ಚಪ್ಪಲಿ!

ಬೆಚ್ಚಿಬಿದ್ದನು. ಅವನ ಊಹೆ ನಿಜವಾಗಿತ್ತು. ರೇವತಿ ಭಯ, ಗಾಬರಿಯಿಂದ ನೋಡುತ್ತಿದ್ದಾಳೆ.

ಪ್ರಸನ್ನ ಲಿಂಗಯ್ಯನ ರೂಮಿಗೆ ಬಂದನು.

ದೀಪ ಉರಿಯುತ್ತಿದೆ!

ಆದರೆ ರೂಮಿನ ಬಾಗಿಲು ಹಾಕಲಾಗಿತ್ತು

ಪ್ರಸನ್ನ ವಿಂಡೋ ಮೂಲಕ ನೋಡಿದನು. ಮಂಚದ ಹತ್ತಿರ ಒಂದೇ ಒಂದು ಚಪ್ಪಲಿ ಇತ್ತು

ರೇವತಿ ಅವನ ಹತ್ತಿರ ಬಂದಳು

ಪ್ರಸನ್ನ ಅವನ ಕಡೆ ತಿರುಗಿ" ರೇವತಿ ನನ್ನ ರೂಮಿಗೆ ಬಾ ನಿನ್ನ ಸಂದೇಹಗಳಿಗೆ ಉತ್ತರಿಸುತ್ತೇನೆ"

ರೇವತಿ ಅವನ ಮುಖವನ್ನೇ ಒಂದೆರಡು ಕ್ಷಣ ನೋಡಿದಳು ನಂತರ ಹಿಂಬಾಲಿಸಿದಳು.

ಪ್ರಸನ್ನ ರೂಮಿಗೆ ಬಂದ ಕೂಡಲೇ ಪ್ಲಾಸ್ಕಿನಿಂದ ಬಿಸಿಬಿಸಿ ಕಾಫಿಯನ್ನು ಗ್ಲಾಸುಗಳಿಗೆ ಬಗ್ಗಿಸಿದನು.

ಇಬ್ಬರೂ ಕಾಫಿ ಕುಡಿಯುತ್ತಿದ್ದಾರೆ,

ಪ್ರಸನ್ನ ಸಿಗರೇಟ್ ಅನ್ನು ಸೇದುತ್ತಿದ್ದಾನೆ. ಅವನ ಮುಖ ವ್ಯಗ್ರವಾಗಿದೆ. ಕೋಪದ ಸಂಕೇತವಾಗಿ ಕಿವಿಯ ತುದಿ ಕೆಂಪೇರಿದೆ!

ಭಾವನೆಗಳ ತೊಳಲಾಟ!

ರೇವತಿ" ನಿಮ್ಮನ್ನು ಕೊಲೆ ಮಾಡಲು ಪ್ರಯತ್ನಿಸಿದ್ದು ಯಾರು ಅಂತ ಹೇಳುತ್ತೀರ ಪ್ರಸನ್ನ"

ಪ್ರಸನ್ನ ಮೆಲ್ಲಗೆ " ನನ್ನ ಅಣ್ಣ ಲಿಂಗಯ್ಯ" ಎಂದು ಚಪ್ಪಲಿಯ ಗುರುತಿನ ಬಗ್ಗೆ ಹೇಳಿದನು.

ರೇವತಿ ಆಶ್ಚರ್ಯದಿಂದ " ನಿಮ್ಮ ಅಣ್ಣ ಲಿಂಗಯ್ಯನಿಗೆ ಬುದ್ಧಿ ಭ್ರಮಣೆಯಾಗಿಲ್ಲವೆ?"

ಪ್ರಸನ್ನ ವಿಷಾದದಿಂದ " ಇವರೆಲ್ಲಾ ಸೇರಿಕೊಂಡು ನನಗೆ ಹುಚ್ಚು ಹಿಡಿಸಿದ್ದಾರೆ. ನನ್ನ ಅಕ್ಕನ ಗಂಡ ಮಾತ್ರ ನಾಟಕ ಆಡುತ್ತಿದ್ದ ಅಂದುಕೊಂಡಿದ್ದೆ. ಈಗ ನನ್ನ ಅಣ್ಣ ಲಿಂಗಯ್ಯ ಸಹ ಮೋಸ ಮಾಡುತ್ತಿದ್ದಾನೆ. ಇನ್ನು ಉಳಿದಿರೋನು ನನ್ನ ದೊಡ್ಡ ಅಣ್ಣ ವೀರಭದ್ರ . ಅವನು ಇನ್ಯಾವ ರೀತಿ ನಾಟಕ ಆಡುತ್ತಿದ್ದಾನೋ ಗೊತ್ತಿಲ್ಲ. ನನಗೆ ತಲೆ ಬಿಸಿಯಾಗಿದೆ'

ರೇವತಿ " ಅದು ಸರಿ .... ನಿಮ್ಮ ಅಣ್ಣ ಲಿಂಗಯ್ಯ ಹುಚ್ಚನ ತರಹ ಯಾಕೆ ನಾಟಕ ಆಡುತ್ತಿದ್ದಾರೆ?"

"ಅದೇ.... ಅದೇ.... ನನಗೆ ಗೊತ್ತಿಲ್ಲ."

"ಕೊಲೆ ಮಾಡಲು ಪ್ರಯತ್ನಿಸಿದ್ದು ಯಾಕೆ?"

ಪ್ರಸನ್ನ "ಇದೇನು ಮೊದಲನೆಯ ಪ್ರಯತ್ನ ಅಲ್ಲ. ಈ ಹಿಂದೆ ಎರಡು ಸಲ ಪ್ರಯತ್ನಿಸಿದ್ದ."

ರೇವತಿ ಗಾಬರಿಯಿಂದ " ಅಲ್ರೀ..... ನೀವು ಯಾಕೆ ಎಲ್ಲಾ ಗೊತ್ತಿದ್ರೂ ಸಹ ಸುಮ್ಮನಿದ್ದೀರ?"

" ಇನ್ನೇನು ಮಾಡಬೇಕಿತ್ತು"

"ಪೋಲಿಸರಿಗೆ ತಿಳಿಸಬೇಕಿತ್ತು"

ಪ್ರಸನ್ನ ಗಂಭೀರವಾಗಿ " ಕೆಲವು ವಿಚಾರಗಳನ್ನು ಪೋಲಿಸರಿಗೆ ತಿಳಿಸಲು ಸಾಧ್ಯವಿಲ್ಲ. ಅಲ್ಲದೆ ನನ್ನ ಮೇಲೆ ಹತ್ಯೆಯ ಪ್ರಯತ್ನ ನಡೆದಿದೆ ಎಂಬುದನ್ನು ನಿರೂಪಿಸಲು ನನ್ನ ಹತ್ತಿರ ಯಾವ ಆಧಾರವೂ ಇಲ್ಲ."

ರೇವತಿ ಭಯದಿಂದ " ಹಾಗಂತ ಎಷ್ಟು ದಿವಸಗಳ ಕಾಲ ಮೃತ್ಯುವಿನೊಂದಿಗೆ ಕಳೆಯುತ್ತೀರ?"

ಪ್ರಸನ್ನ ಗಂಭೀರವಾಗಿ "ಇನ್ನು ನಾನು ಖಂಡಿತಾ ಸುಮ್ಮನಿರಲಾರೆ. ಏನಾದರೂ ಮಾಡಲೇ ಬೇಕು"

" ಏನು ಮಾಡುತ್ತೀರ?"

ಪ್ರಸನ್ನ ಎದ್ದು ಬಂದು ಕಿಟಕಿಯ ಹತ್ತಿರ ನಿಂತುಕೊಂಡು ಆಗಸದಲ್ಲಿನ ನಕ್ಷತ್ರಗಳನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದಾನೆ.

ತಂಗಾಳಿ ಹಿತವಾಗಿ ಬೀಸುತ್ತಿದೆ!

ಏಕಾಂತ ರಾತ್ರಿಯ ನಿಶ್ಯಬ್ದತೆ!

ರೇವತಿಯ ಕಡೆಗೆ ತಿರುಗಿ " ನನ್ನನ್ನು ಮುಗಿಸಲು ಪ್ರಯತ್ನಿಸುತ್ತಿರುವ ಅಣ್ಣ ಲಿಂಗಯ್ಯನಿಗೆ ಬುದ್ದಿ ಕಲಿಸಬೇಕು."

ಯಾವ ರೀತಿ ಅಂತ ಕೇಳಲಿಲ್ಲ!

****

ರಾತ್ರಿ ಹನ್ನೆರಡರ ಸಮಯ!

ಬಂಗಲೆಯ ದೀಪಗಳೆಲ್ಲಾ ಈಗ

20ನೇ ಪುಟಕ್ಕೆ

ಇಲ್ಲಿಯವರೆಗೆ.........

ರೇವತಿ ಗೆಳತಿಯ ಸಾವಿನ ರಹಸ್ಯ ಕಂಡು ಹಿಡಿಯಲು ಅದೇ ಊರಿನಲ್ಲಿ ಇರಲು ನಿರ್ಧರಿಸಿ ಪ್ರಸನ್ನನ ಬಂಗಲೆಗೆ ಬರುತ್ತಾಳೆ. ಯಾರೋ ಆ ರಾತ್ರಿ ಪ್ರಸನ್ನನನ್ನು ಸಾಯಿಸಲು ಪ್ರಯತಿಸುತ್ತಾರೆ. ಹಂತಕನನ್ನು ಗುರುತಿಸಲು ಬಲವಾದ ಸುಳಿವು ದೊರೆಯುತ್ತದೆ.

ಮುಂದೆ ಓದಿ.........

ರೊಟ್ಟಿಗೆ ಬಿಟ್ಟ ಹಿಟ್ಟಿಲ್ಲ, ಅಳಿಯನಿಗೆ ಬಿಟ್ಟ ನೆಂಟರಿಲ್ಲ.

# ಗೃಹ ಸಂಗಾತಿ

## ಆಲೂಗಡ್ಡೆ ವಡೆ ನಂ. 1

**ಬೇಕಾಗುವ ಸಾಮಾನು :** 1/2ಕಿಲೋ ಆಲೂಗಡ್ಡೆ (ಬಟಾಟೆ), 2 ಕಟ್ಟು ಕೊತ್ತಂಬರಿ ಸೊಪ್ಪು, 5 ಈರುಳ್ಳಿ, 1 ದೊಡ್ಡ ಚಮಚ ತುಪ್ಪ, 1/2 ಪಾವು ಮೈದಾ, 8 ಹಸಿ ಮೆಣಸಿನ ಕಾಯಿ, ಉಪ್ಪು, ಕರಿಯಲು ಎಣ್ಣೆ.

**ವಿಧಾನ :** ಆಲೂಗೆಡ್ಡೆ ಬೇಯಿಸಿ ಸಿಪ್ಪೆ ತೆಗೆದು, ಹಿಸುಕಿ ನುಣ್ಣಗೆ ಮಾಡಿಕೊಳ್ಳಿ. ಇದಕ್ಕೆ ಸಣ್ಣಗೆ ಹೆಚ್ಚಿದ ಈರುಳ್ಳಿ, ಕೊತ್ತಂಬರಿ ಸೊಪ್ಪು, ಹಸಿ ಮೆಣಸಿನಕಾಯಿ, ಮೈದಾ ಹಿಟ್ಟು, ಉಪ್ಪು, ತುಪ್ಪ ಹಾಕಿ ಕಲಸಿ. ನಿಂಬೆರಸ ಸೇರಿಸಿ. ಈಗ 1-2 ಅಂಗುಲದಷ್ಟು ಅಗಲದ ಮತ್ತು 1ಅಂಗುಲ ದಪ್ಪವಾದ ವಡೆ ಮಾಡಿ ಕಾದ ಎಣ್ಣೆಯಲ್ಲಿ ಕರಿಯಿರಿ.

## ಬಟಾಟೆ ವಡೆ ನಂ. 2

**ಬೇಕಾಗುವ ಸಾಮಾನು :** 1ಕಿ. ಗ್ರಾಂ ಬಟಾಟೆ, ¼ ಕಿ. ಗ್ರಾಂ ಬೆಳ್ತಿಗೆ ಅಕ್ಕಿ ಅಥವಾ 100 ಗ್ರಾಂ ಕಡಲೆ ಹಿಟ್ಟು, ಕರಿಯಲು ಎಣ್ಣೆ.

ಮಸಾಲೆ ಅರೆಯಲು 1ಗೊಂಚಲು ಕೊತ್ತಂಬರಿ ಸೊಪ್ಪು, 2 ಹಸಿ ಮೆಣಸಿನ ಕಾಯಿ, 1 ತೆಂಗಿನಕಾಯಿ (ಹೆರೆದು), 1 ಅಂಗುಲದ ಹಸಿ ಶುಂಠಿ ತುಂಡು; ಒಂದೊಂದು ಟಿ. ಚ. ದಷ್ಟು ಒಣ ಮೆಣಸಿನ ಪುಡಿ, ಅರಿಸಿನ ಪುಡಿ, ಕೊತ್ತಂಬರಿ ಬೀಜ ಮತ್ತು ಜೀರಿಗೆ

**ವಿಧಾನ :** ಅಕ್ಕಿ ½ ತಾಸು ನೀರಿನಲ್ಲಿ ನೆನೆಯಿಡಿ. ಆ ಮೇಲೆ ಬಸಿದು ತೆಗೆದು ಅದಕ್ಕೆ ಉಪ್ಪು ಸೇರಿಸಿ ಅರೆದು ಬಹುಮಟ್ಟಿಗೆ ದಪ್ಪವಾದ (ಹಿಟ್ಟಿನ) ಕಣಕವನ್ನು ಮಾಡಿಟ್ಟುಕೊಳ್ಳಿ, ಇಲ್ಲವೆ ಕಡ್ಲೆ ಹಿಟ್ಟಿಗೆ ಸ್ವಲ್ಪ ನೀರು ಮತ್ತು 1 ಚಿವುಟು ಉಪ್ಪು ಬೆರೆಸಿ ಬಹುಮಟ್ಟಿಗೆ ದಪ್ಪ ತೆಳುವಾದ ಮಿಶ್ರಣವನ್ನು ಮಾಡಿಟ್ಟುಕೊಳ್ಳಿ, ಮಸಾಲೆ ಅರೆಯಿರಿ. ಬಟಾಟೆಗಳನ್ನು ಬೇಯಿಸಿ ಸಿಪ್ಪೆ ಸುಲಿದು ಜಜ್ಜಿ ಮಸಾಲೆಯ ಕಣಕಕ್ಕೆ ಸೇರಿಸಿ ಮಿಶ್ರಮಾಡಿ, ಈಗ 1½ ಅಂಗುಲದಷ್ಟು ಅಗಲದ ಮತ್ತು ½ ಅಂಗುಲ ದಪ್ಪವಾದ ವಡೆ ಮಾಡಿ ಹಿಟ್ಟಿನಲ್ಲಿ ಅದ್ದಿ, ಕಾಯಿಸಿದ ಎಣ್ಣೆಯಲ್ಲಿ ಮುಳುಗಿಸಿ ಕರಿದು ತೆಗೆಯಿರಿ.

## ಹಸಿ ಅವರೆ ಕಾಳಿನ ವಡೆ

**ಬೇಕಾಗುವ ಸಾಮಾನು :** 1ಪಾವು ಅವರೆಕಾಳು, 1 ಪಾವು ಅಕ್ಕಿ ಹಿಟ್ಟು, ½ ಹೋಳು ತೆಂಗಿನಕಾಯಿ, 7 ಅಥವಾ 8 ಹಸಿಮೆಣಸಿನಕಾಯಿ, 1 ಕಟ್ಟು ಕೊತ್ತಂಬರಿ ಸೊಪ್ಪು, ಸ್ವಲ್ಪ ಹಿಂಗು, ರುಚಿಗೆ ಬೇಕಾಗುವಷ್ಟು ಉಪ್ಪು, ಕರಿಯಲು ಎಣ್ಣೆ

**ವಿಧಾನ :** ಅವರೆಕಾಳನ್ನು ಚೆನ್ನಾಗಿ ಬೇಯಿಸಿ ಚೆನ್ನಾಗಿ ಹಿಸುಕಿ, ಅದರಲ್ಲಿ ಅಕ್ಕಿಹಿಟ್ಟು, ಹೆಚ್ಚಿಟ್ಟ ಹಸಿ ಮೆಣಸಿನ ಕಾಯಿ, ಕೊತ್ತಂಬರಿ ಸೊಪ್ಪು, ಹಿಂಗು, ಕಾಯಿತುರಿ, ಉಪ್ಪು, ಎಲ್ಲವನ್ನು ಸೇರಿಸಿ ನೀರು ಸೇರಿಸಿ ಕಲಸಿ ವಡೆಯಂತೆ ತಟ್ಟಿ ಎಣ್ಣೆಯಲ್ಲಿ ಕರಿಯುವುದು. ಇದು ತಿನ್ನಲು ಬಹು ರುಚಿಯಾಗಿರುವುದು.

## ಮೆಣಸಿನ ಕಾಯಿ ವಡೆ

**ಬೇಕಾಗುವ ಸಾಮಾನು:** 1¼ ಕಿ. ಗ್ರಾ ಹಸಿ ಮೆಣಸಿನ ಕಾಯಿ (Medium), 1 ಪಾವು ಉಪ್ಪು, ಚಟಾಕು ಉದ್ದಿನ ಬೇಳೆ, 2 ಹಿಡಿ ಮೆಂತ್ಯ ( ಎರಡನ್ನು ನೆನೆ ಹಾಕಿ), ಸೋಡಾ ಚಿಟಿಕೆ ( ಅಡುಗೆ ಸೋಡಾ)

**ವಿಧಾನ:** ಹಸಿ ಮೆಣಸಿನ ಕಾಯಿ , ಹಿಂಗು, ಕೊತ್ತಂಬರಿ ಸೊಪ್ಪು ಇದನ್ನೆಲ್ಲಾ ಹಾಕಿ ತಿರುವಿ ಆ ಮೇಲೆ ನೆಂದ ಉದ್ದಿನ ಬೇಳೆ ಮತ್ತು ಮೆಂತ್ಯಗಳನ್ನು ರುಬ್ಬಿ ಮೇಲೆ ಹೇಳಿದ ಮೆಣಸಿನ ಕಾಯಿ ರುಬ್ಬಿರುವುದರ ಜೊತೆಗೆ ಹಾಕಿ ಕಲಸಬೇಕು. ಮತ್ತು ಇದನ್ನೆಲ್ಲಾ ಹಾಕಿ ಕಲಸಿದ ಮೇಲೆ ಚಿಕ್ಕ ಚಿಕ್ಕ ವಡೆಗಳಾಗಿ ತಟ್ಟಬೇಕು. ( ದಪ್ಪ ಪ್ಲಾಸ್ಟಿಕ್ ಮೇಲೆ). ತಟ್ಟಿದ ಮೇಲೆ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಬೇಕು. ಒಣಗಿದ ಮೇಲೆ ಎಣ್ಣೆಯಲ್ಲಿ ಕರಿದು ಅನ್ನದ ಜೊತೆಗೆ ಕಲಸಿಕೊಂಡರೆ ತಿನ್ನಲು ಬಲು ರುಚಿ.

## ಕೆಸುವಿನ ಸೊಪ್ಪಿನ ವಡೆ

**ಬೇಕಾಗುವ ಸಾಮಾನು:** 8 ಕೆಸುವಿನ ಎಲೆ, 1/2 ಕಿಲೋ ಸಣ್ಣರವೆ, 10 ಹಸಿ ಮೆಣಸಿನ ಕಾಯಿ, 4 ಈರುಳ್ಳಿ, 1ಟೀ. ಚ. ಜೀರಿಗೆ, ಕರಿಬೇವು, ಕೊತ್ತಂಬರಿ ಸೊಪ್ಪು, 1/2 ಅಂಗುಲ ಹಸಿ ಶುಂಠಿ, 1 ಹೋಳು ತೆಂಗಿನಕಾಯಿ ತುರಿ, ಉಪ್ಪು,

**ವಿಧಾನ:** ಕೆಸುವಿನ ಎಲೆ ತೊಳೆದು ಪೂರಿಯ ಹಾಳೆಯ ಅಗಲಕ್ಕೆ ಕತ್ತರಿಸಿಕೊಳ್ಳಿ, ರವೆಗೆ ಎಲ್ಲಾ ವಸ್ತುಗಳನ್ನು ಹಾಕಿ ಬಿಸಿ ನೀರಿನಲ್ಲಿ ಕಲಸಿಕೊಳ್ಳಿ ನಿಂಬೆ ಗಾತ್ರದ ಉಂಡೆ ಮಾಡಿ ಕತ್ತರಿಸಿದ ಎಲೆಯಲ್ಲಿ ಇಟ್ಟು ಉಗಿಯಲ್ಲಿ ಇಡ್ಲಿಯಂತೆ ಬೇಯಿಸಿ, ಬಿಸಿಯಲ್ಲೇ ತುಪ್ಪದೊಡನೆ ತಿನ್ನಬೇಕು.

---

ಬೆಳೆಯು ಸಿರಿ ಮೊಳಕೆಯಲ್ಲಿ

# ಪ್ರೀತಿ, ಪ್ರೇಮ

ಜನ್ಮಕ್ಕೆ ಕಾರಣ ಕರ್ಮ, ಕರ್ಮಕ್ಕೆ ಕಾರಣ ಪ್ರೀತಿ, ಪ್ರೀತಿಗೆ ಕಾರಣ ಪ್ರೇಮ, ಪ್ರೇಮ ಎಂಬುದು ದಿವ್ಯ ಹಾಗೂ ಆತ್ಮಿಕ ರತ್ನ. ಇದಕ್ಕೆ ಸಂದೇಹವಿಲ್ಲ. ಸಂದೇಹ ಎಂಬುದು ಪ್ರೇಮದ-ಭಯಂಕರ ಶತ್ರು. ದೇಹದಾರಿಯಾದ ಮಾನವನಿಗೆ ಪ್ರೀತಿ ಪ್ರೇಮ ಎಂಬುದಿರಲೇಬೇಕು. ಬಾಳಿ ಬದುಕಿ, ಬದುಕಿ ಬಾಳಿ, ಬಳಲಿ, ಬೀಳಿಲಿರುವ ಈ ದೇಹ ಶಾಶ್ವತವಲ್ಲ. ಮಾನವ ಜೀವನ ಪ್ರೀತಿ, ಭೀತಿ ಮತ್ತು ನೀತಿಯಲ್ಲಡಗಿದೆ. ಅದೇ ದೈವ ಪ್ರೀತಿ, ಪಾಪ ಭೀತಿ ಮತ್ತು ಸಂಘನೀತಿ. ಇದೇ ಸಂಸ್ಕಾರ. ಮಾನವನ ಬಾಳಿಗೆ ಸಂಸ್ಕಾರ ಮುಖ್ಯ ಸಂಸಾರದಲ್ಲಿ ಇದೇ ದಿವ್ಯ ಸಂಸ್ಕೃತಿಯ ಭವ್ಯ ಭಾರತದ ಜನರ ನಿತ್ಯ ಜೀವನ, (ಸಂಸ್ಕಾರ)

ಪ್ರಪಂಚ ಎಲ್ಲಿಂದ ಬರುವುದು, ಎಲ್ಲಿರುವುದು? ಎಲ್ಲಿಗೆ ಹೋಗುವುದು ಇದಕ್ಕೆ ಉತ್ತರ ಪ್ರೀತಿಯಿಂದ ಬರುವುದು, ಪ್ರೀತಿಯಲ್ಲಿರುವುದು, ಪ್ರೀತಿಗೆ ಹೋಗುವುದು ಇದೇ ಪ್ರೀತಿಯ ರಹಸ್ಯ ಪ್ರೀತಿಯೆಂಬುದು ಆಯಸ್ಕಾಂತ. ಪ್ರೀತಿ, ಪ್ರೀತಿಯನ್ನೇ ಆಕರ್ಷಿಸುವುದು. ಉದಾಹರಣೆ ಮಗುವಿನ ಜನನ ಪ್ರೀತಿಯ ಸಂಕೇತ ಅದರ ಹುಟ್ಟೇ ಪ್ರೀತಿ ಇಂದು ನಾವು ಪ್ರೀತಿಯನ್ನು ಅಪಾರ್ಥ ಮಾಡಿಕೊಂಡಿದ್ದೇವೆ. ನಮ್ಮ ಪ್ರೀತಿ ಇಂದು ಬರೇ ಸ್ವಾರ್ಥಕ್ಕಾಗಿ ಗಂಡಹೆಂಡಿರ ಪ್ರೀತಿ ಸ್ವಾರ್ಥ, ನೆಂಟರಿಷ್ಟರ ಪ್ರೀತಿ ಸ್ವಾರ್ಥ, ತಾಯಿ ಮಗುವಿನ ಪ್ರೀತಿ ಸ್ವಾರ್ಥ, ಆಹಾರ, ಧನ, ಧಾನ್ಯಗಳ ಮೇಲೆ ಪ್ರೀತಿ ಸ್ವಾರ್ಥ ಹಾಗಾಗಿ ನಮ್ಮ ಬದುಕು ನಿರರ್ಥಕ. ಸ್ವಾರ್ಥದ ಪ್ರೀತಿಯ ಜೀವನ ಪ್ರಾಣಿ ಜೀವನ.

ಹಾಗಾದರೆ ಪ್ರೀತಿ ಎಂದರೇನು? ಭಕ್ತಿಯನ್ನು ಪಡೆವುದೇ ಪ್ರೀತಿಯ ಲಕ್ಷಣ ಉದಾಹರಣೆ:- ನಮ್ಮ ನಿತ್ಯ ಜೀವನದಲ್ಲಿ ಹಲವು ಬಗೆಯ ಪ್ರೀತಿಯನ್ನು ಕಾಣುತ್ತೇವೆ.

1.ತಾಯಿ, ಮಗುವಿನ ಪ್ರೀತಿ -ವಾತ್ಸಲ್ಯ

2.ಗಂಡಹೆಂಡಿರ ಪ್ರೀತಿ- ಮೋಹ

3.ಸ್ನೇಹಿತರೊಳಗಿನ ಪ್ರೀತಿ- ಅನುರಾಗ

4. ವಾಹನ, ಮನೆ ಮುಂತಾದ ಸಲಕರಣೆಗಳಿಗಾಗಿ ಪ್ರೀತಿ- ಇಚ್ಛಾ.

5. ಈ ಎಲ್ಲಾ ಪ್ರೀತಿಗಳನ್ನು ಭಗವಂತನೆಡೆಗೆ ತಿರುಗಿಸಿದರೆ ಅದೇ ಭಕ್ತಿ. ಪ್ರೀತಿ ಎಂದರೆ ಪಡೆಯುವುದಲ್ಲ ಎಲ್ಲವನ್ನೂ ಕೊಡುವುದು.ಪ್ರೀತಿ ಕೇಳುವುದಿಲ್ಲ ಕೊಡುತ್ತದೆ. ಪ್ರೀತಿ ಪ್ರೀತಿಗಾಗಿ ಅದೇ ಭಗವತ್ ಪ್ರೀತಿ, ಶಾಶ್ವತ ಪ್ರೀತಿ. ಈ ಪ್ರೀತಿಯಿಂದ ಹಿಂತಿರುಗು ವುದೇ ಇಲ್ಲ ಹಾಗೆಯೇ ಪ್ರೀತಿಯಲ್ಲೂ 3 ವಿಧ: ಸ್ವಾರ್ಥ, ಅನ್ಯೋನ್ಯ ಮತ್ತು ಪರಾರ್ಥ. ವಿಶ್ವದ ಕೇಂದ್ರ ಬಿಂದು ಪ್ರೀತಿ, ಪ್ರೀತಿಯ ಪವಿತ್ರತೆಯನ್ನು ಕಾಪಾಡಿಕೊಳ್ಳಿ. ಪ್ರೀತಿಯಿಂದ ಭಕ್ತಿಯನ್ನು ಕಾಣಬೇಕು.

ಚೇಂದ್ರಿಮಾಡ. ಜಿ. ಮುತ್ತಪ್ಪ, ಕುಶಾಲನಗರ.

---

# ಶುಭ ಲಗ್ನ ಕಾರ್ಯಗ

- ಕಾನೆ ಹಿತ್ಲು ಪೌತಿ ಚಂಗಪ್ಪನವರ ಪ್ರಥಮ ಪುತ್ರ ಕೇಶವಂಗೂ ಮತ್ತೆ ಸಂಪಾಜೆ ಗ್ರಾಮದ ಕನ್ಯನ ಹೊನ್ನಪ್ಪನವರ ಮಗ್ಳು ಲೋಲಾಕ್ಷಿಗೂ ತಾರೀಖ್ 9-3-2000ಲಿ ಮಡಿಕೇರಿಯಲ್ಲಿರ್‍ವ ಕೆಳಗಿನ ಗೌಡ ಕಲ್ಯಾಣ ಮಂಟಪಲಿ ಮದವೆ ನಡ್ತ್.
- ಸೋಮವಾರ ಪೇಟೆಯ ನಿವಾಸಿ ಕುದ್ಕುಳಿ ರಾಮಪ್ಪನವ್ರ ಮಂಜ ಗಜೇಂದ್ರಂಗೂ ಮತ್ತೆ ಕಟ್ಟೆಮಾಡ್ ಗ್ರಾಮದ ಬಿದ್ರ್‌ಪಣೆ ಬಿದ್ದಪ್ಪನವ್ರ ಮಗ್ಳು ತೀರ್ಥಂಗೂ ತಾರೀಖ್ 12-3-2000 ಲಿ ಮಡಿಕೇರಿಯ ಮೇಲಿನ ಗೌಡ ಸಮಾಜಲಿ ಮದ್ವೆ ಬಾರಿ ವಿಜೃಂಭಣೆಯಿಂದ ನಡ್ತ್.
- ಸೋಮವಾರಪೇಟೆಯ ಮಸಗೋಡು ಗ್ರಾಮದ ನಂಗಾರ್ ತಿಮ್ಮಯ್ಯನವ್ರ ಮಂಜ ವಸಂತಂಗೂ ಮತ್ತೆ ಕಟ್ಟೆಮಾಡ್ ಗ್ರಾಮದ ಬಿದ್ರ್‌ಪಣೆ ಭೀಮಯ್ಯನವ್ರ ಮಗ್ಳು ಚಂದ್ರಕಲಂಗೂ ತಾರೀಖ್ 30-3-2000ರಲ್ಲಿ ಮಡಿಕೇರಿಯ ಮೇಲಿನ ಗೌಡ ಸಮಾಜಲಿ ಮದ್ವೆ ನಡ್ತ್.
- ಕುಂದಚೇರಿ ಗ್ರಾಮದ ಚೂದಾಡಮ್ಮನವನ ಬೋಪಣ್ಣನವ್ರ ಸುರುನ ಮಗ್ಳು ಮಮತಂಗೂ ಮತ್ತೆ ಹುಣುಸೂರು ತಾಲೋಕು ಕಳಬೋಚನ ಹಳ್ಳಿ ಬಾರಿಯಂಡ ಪೊನ್ನಪ್ಪನವ್ರ ಸುರ್‌ನ ಮಂಜ ಸುಬ್ಬಯ್ಯಂಗೂ ತಾರೀಖ್ 2-4-2000ಲಿ ಮೇಲಿನ ಗೌಡ ಸಮಾಜಲಿ ಮದ್ವೆ ನಡ್ತ್.
- ಮೂರ್ನಾಡು, ಮುತ್ತಾರ್‌ಮುಡಿ ಗ್ರಾಮದ ಪಾರೆಮಜಲು ದೇವಯನವ್ರು 2ನೇ ಮಂಜ ಮಹೇಶ್‌ಗೂ ಬಲಮುರಿ ಗ್ರಾಮದ ಗುಡ್ಡೇರ ಕುಮಾರಪ್ಪನವ್ರ ಮಗ್ಳು ವನಮಾಲ(ವನಿ)ಂಗೂ ಮೂರ್ನಾಡು ಕೊಡವ ಸಮಾಜಲಿ ತಾರೀಖ್ 9-4-2000ರ್‍ಲಿ ಬಾರೀ ವಿಜೃಂಭಣೆಂದ ಮದ್ವೆ ನಡ್ತ್,
- ಸಿದ್ದಾಪುರದ ಕುರುಬರ ಮೊಟ್ಟೆ ತೋಟದ ಮಾಲಿಕರ್ ಮತ್ತೆ ಕೊಡಗ್ ಗೌಡ ಸಮಾಜದ ಅಧ್ಯಕ್ಷರ್ ಆದ ಶ್ರೀ ತೋಟಂಬೈಲ್ ನಾಣಯ್ಯನವ್ರ ಮಂಜ ದರ್ಶನ್‌ಗೂ ಮತ್ತೆ ಗೋಣಿಕೊಪ್ಪದ ಪಡಿಕಲ್ಲ್ ಚೆಂಗಪ್ಪನವ್ರ ಮಗ್ಳು ದಿವ್ಯ ಜ್ಯೋತಿಗೂ ತಾರೀಖ್ 9-4-2000ರ್‍ಲಿ ಮಡಿಕೇರಿಯ ಕೆಳಗಿನ ಗೌಡ ಸಮಾಜಲಿ ಬಾರಿ ವಿಜೃಂಭಣೆಯಿಂದ ಮದುವೆ ಕಳ್ತ್.
- ಕುಂಬಳದಾಳ್ ಗ್ರಾಮದ ಕರ್ಣಯ್ಯನ ಶ್ರೀ ಶ್ರೀಮತಿ ದಿ|| ಅಶೋಕ್‌ಕುಮಾರ್ ( ರಾಮಯ್ಯ)ರವ್ರ ಮೊದಲ ಮಂಜ ಚಿ||ರಾ|| ಮಧು ಮತ್ತೆ ಅವಂದೂರ್ ಗ್ರಾಮದ ಕಾಳೇರಮ್ಮನ ಶ್ರೀ ಶ್ರೀಮತಿ ತಮ್ಮಯ್ಯ ರುಕ್ಮಿಣಿಯವ್ರ ಮೊದಲ ಮಗ್ಳು ಚಿ||ಸೌ|| ಲೀಲಾವತಿ (ಸುಜ) ಇವ್ರ ಮದ್ವೆ ಕುಂಬಳದಾಳ್ ಗ್ರಾಮದ ಕರ್ಣಯ್ಯನ ಐನ್‌ಮನೆಲಿ ತಾರೀಖ್ 9-4-2000ನೇ ಐತ್ಯವಾರದಂದ್ ನಡ್ತ್.

---

**ಕಂಚು ಕಾಣದವ ಹೊತ್ತಿಗೆ ಮೂರು ಸಾರಿ ಬೆಳಗಿ ಉಂಡ**

# ಪತ್ರ ವಿಭಾಗ :






ಮಾನ್ಯರೇ,

ಸನ್ಮಾನ್ಯರಾದ ಪ್ರೊ. ಪೂಜಾರಿ ಮೊಣ್ಣಪ್ಪನವರು ಗೌಡ ಸಮುದಾಯದ ಬಗೆಗೆ ಅಮೂಲ್ಯವಾದ ವಿವರ ನೀಡಿದ್ದಾರೆ. ಅವರ ಕಳಕಳಿ ಸ್ವಾಗತಾರ್ಹ. ಲಿಖಿತ ಚರಿತ್ರೆಯಿಲ್ಲದ ಸಮುದಾಯವೊಂದರ ಚರಿತ್ರೆಯನ್ನು ಬರೆಯುವಾಗ ಈ ಬಗೆಯ ಭಾವುಕತನ ಸಹಜ. ಇಷ್ಟಿದ್ದರೂ ನನ್ನಲ್ಲಿ ಕೆಲವು ಸಂದೇಹಗಳಿವೆ. ಅದನ್ನು ಸಂಕ್ಷಿಪ್ತವಾಗಿ ಮಂಡಿಸುತ್ತಿದ್ದೇನೆ.

೧. ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ ಬಂದ ಅನಂತರ ಸಂಸ್ಕೃತರಾದರು ಎಂದು ಯಾರಾದರೂ ಬರೆದಿದ್ದಾರೆಯೇ? ಮೊಣ್ಣಪ್ಪನವರಿಗೆ ಈ ಸಂದೇಹ ಎಲ್ಲಿಂದ ಬಂತು?

೨. ಪುತ್ತೂರು ತಾಲೂಕು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ವಾಸವಾಗಿರುವ ಗೌಡರು ಮದುವೆಗಳಲ್ಲಿ ತುಳುಭಾಷೆಯನ್ನೇ ಆಡುತ್ತಾರೆ. ಅಲ್ಲಿ ಕನ್ನಡವಾಗಲೀ, ಅರೆಭಾಷೆಯಾಗಲೀ ಇಲ್ಲ. ಅಂದ ಮಾತ್ರಕ್ಕೆ ಅವರು ಗೌಡರಲ್ಲವೆಂದು ಅರ್ಥವೇ?

೩. ಗೌಡರ ಸಂಸ್ಕೃತಿ ದಕ್ಷಿಣ ಯಾ ಹಾಸನ ಜಿಲ್ಲೆಯಲ್ಲಿ ಪ್ರಾರಂಭವಾಯಿತೆಂದು ನನಗೆ ತಿಳಿದಂತೆ ಯಾರೂ ಹೇಳಿಲ್ಲ. ಕರಾವಳಿಗೆ ಗೌಡರು ಐಗೂರು ಪರಿಸರದಿಂದ ವಲಸೆ ಬಂದಿದ್ದಾರೆ ಎಂಬುದನ್ನು ನಮ್ಮ ಹಿರಿಯರು ಅನೇಕರು ಒಪ್ಪಿಕೊಂಡಿದ್ದಾರೆ. ಇದೂ ಒಂದು ಸತ್ಯ ಅಲ್ಲವೆ?

೪. ಗೌಡರ ಸಂಸ್ಕೃತಿ ಹಿಂದೂ ಸಂಸ್ಕೃತಿಯ ಅಂಗ ಎಂದು ವಾದಿಸಿದರೆ, ಮೊಣ್ಣಪ್ಪನವರು ಉಲ್ಲೇಖಿಸುವ ಅನೇಕ ಧರ್ಮ ಶಾಸ್ತ್ರಗಳಿಗೆ ಒಂದು ಅರ್ಥ ಬರುತ್ತದೆ. ಆದರೆ ಮರು ಕ್ಷಣದಲ್ಲಿಯೇ ಅವರು 'ಆರ್ಯ ಜನಾಂಗದವರು ಬರುವುದಕ್ಕೆ ಮೊದಲೇ ಭಾರತದಲ್ಲಿ ಗೌಡರು ನೆಲೆಸಿದ್ದರು' ಎನ್ನುತ್ತಾರೆ. ಇದು ಹೌದಾದರೆ ಗೌಡರು ಆರ್ಯೇತರ (=ಹಿಂದೂವೇತರ) ಸಮುದಾಯಕ್ಕೆ ಸೇರಿದವರು ಎಂದರ್ಥವಾಗುತ್ತದೆ. ಇವೆರಡೂ ನಿಜವಾಗಲೂ ಸಾಧ್ಯವಿಲ್ಲ ಆದರೆ ಯಾವುದು ನಿಜ?

೫. ಪಾಡ್ದನ ಹೇಳುವವರು ಗೌಡರು' ಎಂಬೊಂದು ಮಾತಿದೆ. ನನಗೆ ತಿಳಿದಂತೆ ದ. ಕ. ಜಿಲ್ಲೆಯಲ್ಲಿ ಯಾವ ಗೌಡರೂ ಪಾಡ್ದನ ಹೇಳುವುದಿಲ್ಲ. ಅದನ್ನು ಅಜಿಲ, ನಲಿಕೆ, ಪಂಬದ ಮೊದಲಾದ ವರ್ಗಕ್ಕೆ ಸೇರಿದ ಜನರು ಭೂತಾರಾಧನೆಯ ಸಂದರ್ಭದಲ್ಲಿ ಹೇಳುತ್ತಾರೆ. ಮೊಣ್ಣಪ್ಪನವರ ಮಾತಿಗೆ ಅರ್ಥ ಏನು?

೬. ಬಂಟರಿಗೆ ಎಂಟು ಬಳಿಗಳಿವೆ, ಬಿಲ್ಲವರಿಗೆ 14 ಬಳಿಗಳಿವೆ ಎಂಬ ಮಾತಿಗೆ ಆಧಾರ ಏನು? ನನಗೆ ತಿಳಿದಂತೆ ಬಂಟರಲ್ಲಿ ಮತ್ತು ಬಿಲ್ಲವರಲ್ಲಿ 32 ಕ್ಕೂ ಹೆಚ್ಚು ಬಳಿಗಳಿವೆ.

೭. 'ಬಳಿಗಳು ಬರೇ ದಕ್ಷಿಣ ಕನ್ನಡ ಜಿಲ್ಲೆಯದೇ ಸಂಸ್ಕೃತಿ" ಎಂದು ಯಾರು ಎಲ್ಲಿ ಹೇಳಿದ್ದಾರೆ? ಸುಳ್ಯ ಪರಿಸರದ ಗೌಡರಲ್ಲಿರುವ ಬಳಿ ಪದ್ಧತಿಯು ಅಲ್ಲಿಯ ಇತರ ಸಮುದಾಯಗಳ ಬಳಿ ಪದ್ಧತಿಯೊಂದಿಗೆ ಸಮಾನ ಅಂಶಗಳನ್ನು ಇರಿಸಿಕೊಂಡಿದೆ.

ಪ್ರೊ. ಮೊಣಪ್ಪನವರು ಸರಿಯಾಗಿ ಹೇಳಿದಂತೆ ಒಂದು ಜಾತಿಯ ವಿಷಯವನ್ನು ಬರಿವಾಗ ಆ ಜಾತಿಯ ಚಾರಿತ್ರಿಕ ಆಧಾರದ ಮೇಲೆಯೇ ಬರೆಯಬೇಕು. ಬರೇ ಊಹನೆಗಳಿಂದ ಬರೆದರೆ ತಪ್ಪಾಗುತ್ತದೆ. ಮುಗ್ದ ಜನರಿಗೆ ಇದರಿಂದ ಸಂಶಯ ಉಂಟಾಗುತ್ತದೆ.

ಪುರುಷೋತ್ತಮ ಬಿಳಿಮನೆ
A-35, Masoodpur, Vasant Kunj
New Delhi - 110070

---

ಸಂಪಾದಕರಿಗೆ

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆನ ನೀವ್ ನಾಲ್ಕ್ ವರ್ಷದ ಹಿಂದೆ ಹುಟ್ಟು ಹಾಕಿ ನಿರಂತರವಾಗಿ ನಡ್ಸಿಕ್ಕಂಡ್ ಬಂದ್ ಅರೆ ಭಾಷಿಕರ ಬಹುದಿನದ ಅಪೇಕ್ಷೆನ ಈಡೇರಿಸಿಯೊಳರಿ. ನಿಮಿಗೆ ನನ್ನ ಆತ್ಮೀಯ ಧನ್ಯವಾದಗ. ಮತ್ತೆ ಶುಭ ಹಾರೈಕೆಗ. ಈ ನಿಮ್ಮ ಮತ್ತೆ ನಮ್ಮೆಲ್ಲರ ಪತ್ರಿಕೆ ಯಾವುದೇ ಬಾಲಗ್ರಹ ಪೀಡೆಗೆ ಒಳಗಾಗದೆ ದೀರ್ಘಾಯುವಾಗಿ ಬಾಳಲಿಂತ ಹಾರೈಸಿನೆ. ಇದ್ ಅರೆ ಭಾಷಿಕರ ಯಾವುದೇ ಸಂಘಟಿತ ಚಟುವಟಿಕೆಗೆ ಅದರ್‌ಲ್ಲಿ ಪ್ರತ್ಯಕ್ಷ ಭಾಗಿಯಾಗದವುಕ್ಕೂ ತಿಳ್‌ಸುತ್ತಾ ಎಲ್ಲಾ ಸಂಘಟನೆಗಳಿಗೂ ಸಾಮಾನ್ಯ ವೇದಿಕೆ ಆಗಿ ಕಾರ್ಯ ನಿರ್ವಹಿಸ್‌ತ್ತಿರುದು ನಿಜಕ್ಕೂ ಹೆಮ್ಮೆಯ ವಿಚಾರ.

1999ನೇ ಇಸ್ವಿ ಡಿಸೆಂಬರ್ 26ರಂದ್ ಮಡಿಕೇರಿಲಿ ನೀವೇ ನಡ್ಸಿ ಕೊಟ್ಟ ಮುಖಾಮುಖಿ ಕಾರ್ಯಕ್ರಮದ ನಂತರ ನಿಮ್ಮ ಪತ್ರಿಕೆಲಿ ಹಲವಾರ್ ಗುಣಾತ್ಮಕ ಬದಲಾವಣೆನ ಜಾರಿಗೊಳಿಸಿಯೊಳರಿ. ಪತ್ರಿಕೆನ ವಿಷಯ ಸೂಚಿಲಿ ಲೇಖನಗಳ ಎದ್ರ್ ಲೇಖಕರ ಹೆಸರ್‌ಗಳ್ನ ಹಾಕ್‌ತೊಳರಿ. ಹೊಸ್ದಾಗಿ ರಾಶಿಫಲ ಹಾಕಿಗೆ ಶುರು ಮಾಡಿಯೊಳರಿ. ನಿಮ್ಮ ಅವಿರತ ದುಡಿಮೆಗೆ ಹಣ ಗಳಿಕೆ ಸಾಕಷ್ಟ್ ಇಲ್ಲದಿದ್ದರೂ ಜನ ಮನ್ನಣೆಗಳಿಸುತ್ತಾವೊಳರಿ. ಸಾರ್ಥಕ ಬದ್‌ಕಿಗೆ ಇನ್ನೇನ್ ಬೇಕು? " ಕೊಡಗು ಸಂಗಾತಿ"ಯ ಹುಟ್ಟು ಹಬ್ಬಕ್ಕೆ ಮತ್ತೊಮ್ಮೆ ಶುಭ ಹಾರೈಸುತ್ತಾ ವಿರಮಿಸಿನೆ.

**– ಕುಲ್ಲಚನ ಕಾರ್ಯಪ್ಪ, ಕುಂಬಳದಾಳುಗ್ರಾಮ**

---

## ನಗೆಹನಿ

ಇಬ್ಬರ್ ವಿದ್ಯಾರ್ಥಿಗ ಹೊರಗೆ ಮಾತಾಡ್ತಾ ಇದ್ರೊ.
ಒಬ್ಬ : ಏನ್ ಕ್ಲಾಸ್‌ಲಿ ಲೀವ್ ಲೆಟರ್ ಕೊಟ್ಟದಕ್ಕೆ ನಿನ್ನ ಟೀಚರ್ ಹೊರಗೆ ಹಾಕಿ ಬುಟ್ತಾ?
ಮತ್ತೊಬ್ಬ : ಹೌದ್‌ರಾ, ನಾನ್ ಲೀವ್ ಲೆಟರ್ ಕವರ್‌ನ ಮೇಲೆ ಮರ್ತ್ ಬುಟ್ಟ್‌ಲವ್ ಲೆಟರ್‌ತ ಬರ್ದ್ ಬುಟ್ಟಿದ್ದೆ ಅದ್ಕೆ

ಅಚ್ಚಲ್ಪಾಡಿ ಬೀನ ಗೋಪಾಲ

---

ನಾಲಿಗೆ ಕುಲ ಹೇಳಿತು

4ನೇ ಪುಟದಿಂದ

ರಾಗಿರಲು ಒಪ್ಪಕೊಂಡಿವೆ. ಪ್ರಮುಖ ಮಾರ್ಗಗಳಾದ ಹುಬ್ಬಳ್ಳಿ-ಅಂಕೋಲ, ಗದಗ್-ಶೋಲಾಪುರ, ಸಕಲೇಶಪುರ-ಮಂಗಳೂರು ಹಾಗೂ ಬೆಂಗಳೂರು-ಮೈಸೂರು ಜೋಡಿ ಮಾರ್ಗಗಳನ್ನು ಸಂಪೂರ್ಣಗೊಳಿಸಲು ನಿಗಮವು ಸಂಪನ್ಮೂಲ ಕ್ರೋಢೀಕರಿಸುತ್ತದೆ.

ಆಡಳಿತವನ್ನು ಸುಧಾರಣೆ ಮಾಡಿ ಜನರ ಸಮಸ್ಯೆಗಳಿಗೆ ವೇಗವಾಗಿ ಸ್ಪಂದಿಸುವ ಉದ್ದೇಶದಿಂದ ಆಡಳಿತ ಸುಧಾರಣಾ ಆಯೋಗವನ್ನು ರಚಿಸಲಾಗುತ್ತಿದೆ.

ಬಹುಮುಖಿ ಜಾನಪದ ಸಂಸ್ಕೃತಿಯನ್ನು ಸಂರಕ್ಷಿಸುವ ಸಲುವಾಗಿ ಜಾನಪದ ಲೋಕದ ಸಹಯೋಗದೊಡನೆ ರಾಮನಗರ ಬಳಿಯಲ್ಲಿ ಮಾದರಿ ಕಲಾ ಸಮುಚ್ಚಯ ಸ್ಥಾಪನೆ. ಗಡಿ ಸಮಸ್ಯೆಗಳ ಅಧ್ಯಯನಕ್ಕೆ ಆಯೋಗ ರಚನೆ.

ಮೌಲ್ಯವರ್ಧಿತ ತೆರಿಗೆ ಜಾರಿಗೊಳಿಸುವ ಸಲುವಾಗಿ ತೆರಿಗೆ ಸುಧಾರಣೆ ಆಯೋಗವೊಂದನ್ನು ರಚಿಸಲಾಗುತ್ತಿದೆ ಎರಡನೇ ಆರ್ಥಿಕ ಆಯೋಗವನ್ನು ರಚಿಸಲಾಗುತ್ತಿದೆ.

ಶಾಸಕರ ಕ್ಷೇತ್ರಗಳ ಅಭಿವೃದ್ಧಿಗಾಗಿ ಕ್ಷೇತ್ರ ಅಭಿವೃದ್ಧಿ ನಿಧಿಯನ್ನು ಯೋಜಿಸಲು ಗಂಭೀರವಾಗಿ ಪರಿಗಣಿಸಲಾಗುತ್ತಿದೆ.

ಅಬಕಾರಿ ಇಲಾಖೆಯಲ್ಲಿ ಬಾಕಿ ಇರುವ 306ಕೋಟಿ ರೂ. ಗಳನ್ನು ವಸೂಲಿ ಮಾಡುವ ಸಲುವಾಗಿ ಕರ ವಿವಾದ ಸಮಾಧಾನ ಯೋಜನೆ ಜಾರಿಗೆ ತರಲಾಗುತ್ತಿದೆ. ಸುಸ್ತಿದಾರರು ಅಸಲು ಪಾವತಿಸಲು ಮುಂದೆ ಬಂದರೆ ಬಡ್ಡಿಯನ್ನು ಮನ್ನಾ ಮಾಡಲಾಗುತ್ತದೆ. ಈ ಯೋಜನೆ ಕೇವಲ ಮೂರು ತಿಂಗಳು ಮಾತ್ರ ಜಾರಿಯಲ್ಲಿರುತ್ತದೆ.

ರಾಜ್ಯದಲ್ಲಿ ಸಾಕಷ್ಟು ಅಪಮೌಲ್ಯ ಪ್ರಕರಣಗಳು ಬಾಕಿ ಇದ್ದು ಅವುಗಳನ್ನು ಶೀಘ್ರವಾಗಿ ವಿಲೇವಾರಿ ಮಾಡುವ ಸಲುವಾಗಿ ಏಕ ಕಾಲಿಕ ಇತ್ಯರ್ಥ ಯೋಜನೆಯನ್ನು ಜಾರಿಗೆ ತರಲು ಉದ್ದೇಶಿಸಲಾಗಿದೆ. 16-8-99ರಂದು ಅಥವಾ ಅದಕ್ಕೂ ಮುಂಚೆ ನೋಂದಣಿಗೆ ಹಾಜರು ಪಡಿಸಿದ ದಸ್ತಾವೇಜುಗಳು ಹಾಗೂ ಇತ್ಯರ್ಥಕ್ಕೆ ಬಾಕಿ ಇರುವ ಪ್ರಕರಣಗಳಿಗೆ ಅನ್ವಯಿಸುತ್ತದೆ.

ಜನವಾಹಿನಿ ವರದಿ

---

16ನೇ ಪುಟದಿಂದ

ಆರಿದೆ! ಹೆಚ್ಚು ಕಮ್ಮಿ ಎಲ್ಲರೂ ಸಹ ನಿದ್ರಿಸುತ್ತಿರುವ ಸಮಯ!

ನಿಶ್ಶಬ್ದವಾಗಿ ಹೆಜ್ಜೆ ಇಡುತ್ತಿದೆ!

ಮಹಡಿಯ ಮೆಟ್ಟಿಲುಗಳನ್ನು ಹತ್ತುತ್ತಾ ಎಲ್ಲಾ ಕಡೆ ಚುರುಕಾಗಿ ನೋಡುತ್ತಿದೆ ಆ ವ್ಯಕ್ತಿ!

ಮುಖ ಸುತ್ತಾ ಕಂಬಳಿ ಕವಿದಿದೆ!

ಆ ವ್ಯಕ್ತಿ ಈಗ ಪ್ರತಿಯೊಂದು ರೂಮಿನ ಹತ್ತಿರ ಸಹ ನಿಂತುಕೊಂಡು ಬಗ್ಗಿ ನೋಡುತ್ತಿದೆ.!

ವೀರಭದ್ರನ ಕೊಠಡಿ!

ಲಿಂಗಯ್ಯ....... ಪ್ರಸನ್ನ!

ಕೊನೆಗೆ ರೇವತಿಯ ಕೊಠಡಿ!

ಆ ವ್ಯಕ್ತಿ ತೆರೆದಿದ್ದ ವಿಂಡೋ ಮೂಲಕ ರೇವತಿಯನ್ನು ಒಂದು ಸಲ ನೋಡಿತು. ಮುಖದಲ್ಲಿ ನಗು!

ಅಲ್ಲಿಂದ ಮುಂದೆ ನಡೆಯಿತು!ನಾಲ್ಕನೇ ರೂಮಿನ ಹತ್ತಿರ ಬಂದು ನಿಂತು ಕೊಂಡಿತು. ರೂಮಿನ ಬಾಗಿಲು ಓರೆಯಾಗಿತ್ತು!

ವ್ಯಕ್ತಿ ಬಾಗಿಲನ್ನು ಮೆಲ್ಲಗೆ ತಳ್ಳಿತು!

ಬೆಡ್ ಲೈಟ್ ಉರಿಯುತ್ತಿದೆ!

ಆ ವ್ಯಕ್ತಿ ಈಗ ಮಂಚದ ಹತ್ತಿರ ಬಂದು ನಿಂತು ಕೆಕ್ಕರಿಸಿಕೊಂಡು ನೋಡಿತು ನಿದ್ರಿಸುತ್ತಿದ್ದವನನ್ನು!

ಅದು ಅರೆಹುಚ್ಚ ಲಿಂಗಯ್ಯನ ರೂಮು!

ಡೋರ್ ಕ್ಲೋಸ್ ಆಯಿತು!

ಆ ಮುಸುಕುದಾರಿ ವ್ಯಕ್ತಿಯ ಕಣ್ಣಿಗೆ ಅಡ್ಡ ಕಂಬಿಗಳು ಇಲ್ಲದಿರುವ ದೊಡ್ಡ ಕಿಟಕಿ ಕಂಡಿತು!

ಮುಸುಕುದಾರಿಯ ಮುಖ ಅರಳಿತು!

ಬಂಗಲೆಯಲ್ಲಿ ಎಲ್ಲರೂ ನಿದ್ರಿಸುತ್ತಿರುವಾಗ ವಿಚಿತ್ರ ರೀತಿಯಲ್ಲಿ ನಿಗೂಢಮಯ ಘಟನೆ ನಡೆದು ಹೋಗಿತ್ತು! ಎದೆ ನಡುಗಿಸುವ ಭಯಾನಕ ಸನ್ನಿವೇಶಕ್ಕೆ ಇದೇ ನಾಂದಿ!

(ಮುಂದುವರೆಯುತ್ತದೆ)

---

## ಕಾವೇರಿ

ಕಾವೇರಿ ಕಾವೇರಿ ಬಾರಮ್ಮ ಮೈದೋರಿ
ನನ್ನೂರ ಮುಂಬಾಗದ ದಡವೇರಿ ದಡವೇರಿ
ಕೊಡಗಿನ ಕಾವೇರಿ ನಿನ್ನೂರು ಬ್ರಹ್ಮಗಿರಿ
ಚೆಲುವಿನ ಕಾವೇರಿ ಬಾರಮ್ಮ ದಯೆತೋರಿ ||

ಕೊಡಗವರ ಮನೆಮಾತೆ ಕೊಡಗಿನ ದೇವತೆ
ಸುಖ ಸಂಪತ್ತನ್ನೀಯುತ ಬಾರಮ್ಮ ವರದಾತೆ
ನಿನ್ನ ಜಲದ ಸ್ಪರ್ಶದಿಂದ ಪಾಪನಾಶವಾಗುತ್ತೆ
ಎಲ್ಲೆಲ್ಲಿಂದೋ ಭಕ್ತವೃಂದ ನಿನ್ನನೋಡಲು ಬರುತ್ತೆ||

ನಿನ್ನನಾಡ ದಿಟ್ಟಕುವರರೆಲ್ಲ ಬೆಳೆದ ನಾಡಿದು
ಹುಲಿಯಹಾಲ ಕುಡಿದ ನಾಡು ಬೆಡಗಿನೂರು ನಮ್ಮದು.
ಕಾಫಿ, ಏಲ, ಕಿತ್ತಳೆಗಳ ಬೆಳೆವನಾಡು ನಮ್ಮದು
ಬತ್ತ, ಬಾಳೆ, ಮೆಣಸು ಎಲ್ಲ ಬೆಳೆದು ತುಂಬುವ ಬೀಡಿದು||

ಶ್ರೀರಂಗನ ಪಾದ ತೊಳೆಯೆ ಹರಿವತಾಯಿಕಾವೇರಿ,
ಕನ್ನಂಬಾಡಿಯಲ್ಲಿ ಸ್ವರ್ಗದಂತೆ ಕಾಣುವ ಕಾವೇರಿ
ಮೇಕೆದಾಟ ದಾಟಿ ಹೋಗಿಕಡಲ ಸೇರುವ ಕಾವೇರಿ
ಕೊಡಗಿನ ಮಕ್ಕಳ ಬಿಡದೆ ಪೊರೆಯೆ ಕಾವೇರಿ||

ರೋಷ ವೇಶ ಬೇಡ ತಾಯಿ ಎಲ್ಲ ನಿನ್ನ ಮಕ್ಕಳೆ
ಪಾಪವನ್ನು ಮಾಡದಂತ ಮನವನೀಯೆ ಪೂಜ್ಯಳೆ
ಶಿಸ್ತಿನಿಂದ ಬೆಳೆಯುವಂತ ಭಾಗ್ಯಕೊಡೆ ಪವಿತ್ರಳೆ
ಭೂಮಿಯನ್ನು ಹಸಿರಾಗಿಸಿ ಹರಿಯೆ ತಾಯಿ ಹೊಳೆವಳೆ||

ಕವಿಗಳು, ರೈತರು, ವೀರರೂ ಪ್ರೌಢರು ಮೆರೆದ ನಾಡು ನಮ್ಮದು
ಕಲೆಗಳ ಸೌಂದರ್ಯ ನಾಡಿಗೆ ಹಸರಾಗಿ
ಕೊಡಗಿದು ಎಂದೆಂದು ನಮ್ಮದು ನಮ್ಮದು
ನಿನ್ನವರದಮಹಿಮೆಯಿಂದ ಬರೆದೆನಮ್ಮ ಹಾಡಿದು||

ಹೆಚ್.ಎಂ. ನಾಗರಾಜು, ಗೋಣಿಮರೂರು.

---

## ಶುಭ ಹಾರೈಕೆ



ನಾಲ್ಕನೇ ವರ್ಷಕ್ಕೆ ಸರಾಗವಾಗಿ ಮುಂದುವರಿದ ಕೊಡಗು ಸಂಗಾತಿ ಪತ್ರಿಕೆಗೆ ನಮ್ಮೆಲ್ಲರ ಶುಭಾಶಯಗಳು, ತಮ್ಮ ಈ ಅಪ್ರತಿಮ ಧೈರ್ಯ ಸಾಹಸದ ಪ್ರಯತ್ನಕ್ಕೆ ತಮ್ಮೆಲ್ಲರ ತನು, ಮನ, ಧನ, ಪ್ರೋತ್ಸಾಹ, ಆಶೀರ್ವಾದ ದೈವ ಕೃಪೆ ಇದೆ. ಹಾಗೂ ಹಲವಾರು ಅಡೆತಡೆಗಳನ್ನು ನಿರಂತರವಾಗಿ ದಾಟಿ ನಾಲ್ಕನೇ ವರ್ಷಕ್ಕೆ ಹೊರ ಹೊಮ್ಮಿ ಬಂದಿರುವುದಕ್ಕೆ ಶುಭ ಹಾರೈಸುತ್ತೇವೆ.

**ಪಟ್ಟಡ ಗಣಪತಿ, ಅಧ್ಯಕ್ಷರು**

ಪಟ್ಟಡ ಕುಟುಂಬಸ್ಥರ ಜೀರ್ಣೋದ್ಧಾರ ಸಂಘ, ಅವಂದೂರು - 571201, ಮಡಿಕೇರಿ ತಾ||

## ಸಂಗಾತಿಗೆ ಶುಭಾಶಯಗಳು

ಮೂರು ವರ್ಷಗಳಲ್ಲಿ ಕೊಡಗಿನ ಗೌಡರ ಆಚಾರ ವಿಚಾರಗಳ ಮಾಹಿತಿ ನೀಡಿ ಕೊಡಗಿನ ಗೌಡರ ಮತ್ತು ಅರೆ ಭಾಷೆಯ ಏಳಿಗೆಗೆ ಸಾಕಷ್ಟು ಕೊಡುಗೆ ನೀಡಿ ಐಕ್ಯತೆಗೆ ಚಾಲನೆ ನೀಡಿ ನಾಲ್ಕನೆಯ ವರ್ಷಕ್ಕೆ ಕಾಲಿಡುತ್ತಿರುವ "**ಕೊಡಗು ಸಂಗಾತಿ**"ಯ ಸಂಪಾದಕ ವರ್ಗದ ಸದಸ್ಯರಿಗೆ ಶುಭಾಶಯಗಳು.

**ಗೋವಿಂದಮ್ಮನ ಪ್ರವೀಣಕುಮಾರ್**

ನಂ 36, ಸೌರಭ, 3ನೇ ಮುಖ್ಯರಸ್ತೆ, 11ನೇ ಅಡ್ಡರಸ್ತೆ, ಪ್ರಶಾಂತನಗರ,
ಬೆಂಗಳೂರು. ✆ : 3288740

## ಪ್ರಥಮ ವರ್ಷದ ಪುಣ್ಯ ಸ್ಮರಣೆ



**ಕಟ್ಟೆಮನೆ ಗಣಪತಿ (ಮಂಜು)**
ಜನನ : 17-3-1961
ಮರಣ : 17-4-1999

ಶಿಸ್ತಿನ ಸಿಪಾಯಿ ಆಗಿ 15ವರ್ಷದ ದೇಶ ಸೇವೆ ಮಾಡಿ ಮನೆಗೆ ಹಿಂತಿರುಗಿ ಗುಂಡಿನ ದುರ್ಮರಣಕ್ಕೆ ಬಲಿಯಾಗಿ ಒಂದು ವರ್ಷ ಸಂದರೂ ನಿಮ್ಮ ಸವಿನೆನಪು ಮಾತ್ರ ಸದಾ ನಮಗಿಂದು ಉಳಿದಿದೆ.

ಪರಮಾತ್ಮನು ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಅನುದಿನವೂ ಪ್ರಾರ್ಥಿಸುತ್ತೇವೆ.

ಪತ್ನಿ : **ಕೆ. ಸುಧಾ ಗಣಪತಿ**
ಮಕ್ಕಳು : **ಕೆ. ಪರವೀಣ್ ಗಣಪತಿ** (3ವರ್ಷ), **ಕೆ. ಅಮೂಲ್ಯ ಗಣಪತಿ** (6ವರ್ಷ)
**ತೇನನ ರಾಜೇಶ್ ಸೋಮಣ್ಣ**, ಬೆಂಗಳೂರು.

## ವೈಕುಂಠವಾಸಿ



ಕುಶಾಲನಗರದ ಕೊಪ್ಪ ಸಮೀಪ ಮರಡಿಯಾರು ಗ್ರಾಮದ ನಿವೃತ್ತ Forester ಪನ್ನೇಟಿ ದೇವಯ್ಯ ನವರು ದಿನಾಂಕ 12-4-2000ದಂದು ವೈಕುಂಠವಾಸಿಯಾದರು. ಪತ್ನಿ ಮತ್ತು ಅಪಾರ ಬಂಧು ಬಳಗ, ಮಕ್ಕಳು, ಮೊಮ್ಮಕ್ಕಳನ್ನು ಅಗಲಿದ ಇವರಿಗೆ 80 ವರ್ಷ ಪ್ರಾಯವಾಗಿತ್ತು. ಇವರ ತಿಥಿ ಕರ್ಮಾಂತರವನ್ನು ದಿನಾಂಕ 27-4-2000ರಂದು ಮರಡಿಯಾರು ಗ್ರಾಮದ ಅವರ ಸ್ವಗೃಹದಲ್ಲಿ ನಡೆಯಲಿದೆ.

ವರದಿ : **ಬೆಳ್ಯನ ಗೋಪಾಲ, ಮರಡಿಯೂರು.**

## ಸ್ವರ್ಗವಾಸಿ

ಅವಂದೂರು ಗ್ರಾಮದ ಪಟ್ಟಡ ಗಣಪತಿಯವರ ಧರ್ಮಪತ್ನಿ ಗಂಗಮ್ಮನವರು ದಿನಾಂಕ 13-4-2000ರಲ್ಲಿ ನಿಧನರಾದರು. ಇವರಿಗೆ 66 ವರ್ಷ ಪ್ರಾಯವಾಗಿದ್ದು ಪತಿ, ಎರಡು ಗಂಡು, ಮೂರು ಹೆಣ್ಣು ಮಕ್ಕಳು, ಮೊಮ್ಮಕ್ಕಳು ಹಾಗೂ ಅಪಾರ ಬಂಧು ವರ್ಗವನ್ನು ಅಗಲಿದ್ದಾರೆ. ಇವರ ತಿಥಿ ಕರ್ಮಾಂತರವು ದಿನಾಂಕ 29-4-2000ರಂದು ಮೃತರ ಸ್ವಗೃಹದಲ್ಲಿ ನಡೆಯಲಿರುವುದೆಂದು ತಿಳಿದು ಬಂದಿದೆ.

ವರದಿ : **ಪಟಡ ರಶ್ಮಿ ಉಲ್ಲಾಸ**

**ಕೊಡಗು ಸಂಗಾತಿಯ ಸಂಚಾಲಕ, ಏಜೆಂಟ್, ವರದಿ, ಕಲೆಕ್ಷನ್ ಜಾಹಿರಾತುಗಳಿಗಾಗಿ ಈ ಕೆಳಕಾಣಿಸಿದವರನ್ನು ಆಯ್ಕೆ ಮಾಡಲಾಗಿದೆ. ಓದುಗರಿಂದ ಸಹಕಾರವನ್ನು ನಿರೀಕ್ಷಿಸಲಾಗಿದೆ.**



**ಗ್ರಾಮಗಳು :**
ಮಾಲ್ದಾರೆ
ಗುಡ್ಲೂರು
ಸಿದ್ದಾಪುರ
ಮೂಡಬಯಲು
ತಟ್ಟಳ್ಳಿ

**ಪಾರೆಮಜಲು ಕೆ. ಮೋಹನ್**
ಗುಡ್ಲೂರು ಗ್ರಾಮ, ಮಾಲ್ದಾರೆ ಅಂಚೆ



**ಗ್ರಾಮಗಳು :**
ಕೊಯನಾಡು
ಯು. ಚೆಂಬು
ಯಂ. ಚೆಂಬು

**ಗುತ್ತಿಮುಂಡನ ಗಿರೀಶ್‌ಕುಮಾರ್**
ಸಂಪಾಜೆ ಗ್ರಾಮ, ಕೊಯನಾಡು ಅಂಚೆ



**ಗ್ರಾಮಗಳು :**
ವಿರಾಜಪೇಟೆ
ಕೆದಮುಳ್ಳೂರು
ಚೆಯ್ಯಂಡಾಣೆ
ಕಾಕೋಟು ಪರಂಬು
ವಿ. ಬಾಡಗ
ಮರಂದೋಡ
ತೋಮರ

**ಬಾರಿಕೆ ಎಸ್. ಮನು**
ಇಗ್ಗುತಪ್ಪ ಕೋಲ್ಡ್ ಸ್ಟೋರೇಜ್,
ಖಾಸಗಿ ಬಸ್ ಸ್ಟ್ಯಾಂಡ್, ವಿರಾಜಪೇಟೆ



**ಗ್ರಾಮಗಳು :**
ಕುಂಬಳದಾಳು
ಅರ್ವತ್ತೋಕ್ಲು
ರಂಗಸಮುದ್ರ

**ಕುಂಜಿಲನ ರಾಜ**
ಕುಂಬಳದಾಳು ಗ್ರಾಮ, ಅರ್ವತ್ತೋಕ್ಲು ಅಂಚೆ



**ಗ್ರಾಮಗಳು :**
ಐಗೂರು -1
ಐಗೂರು-2
ಕಾಜೂರು
ಹಾರಂಗಿ
ಎಡವಾರೆ

**ದೊಡ್ಡಮನೆ ಮಂಜುನಾಥ**
ಕಾಜೂರು ಗ್ರಾಮ, ಐಗೂರು ಅಂಚೆ,
ಸೋಮವಾರ ಪೇಟೆ ತಾ.



**ಗ್ರಾಮಗಳು :**
ರಂಗಸಮುದ್ರ
ನಂಜರಾಯ ಪಟ್ಟಣ
ಹೊಸ ಪಟ್ಟಣ
ಬಾಳುಗೋಡು
ಬೆಟಗೇರಿ
ಗುಡ್ಡೆಹೊಸೂರು

**ಸೆಟ್ಟ್ರಜನ ಮಾಚಯ್ಯ**
ಬಾಳುಗೋಡು ಗ್ರಾಮ,
ರಂಗ ಸಮುದ್ರ ಅಂಚೆ, ಕುಶಾಲನಗರ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.